# ನೀಚ ಇನಾಮದಾರ.

( ಸಾಮಾಜಿಕ ಕಾದಂಬರಿ. )




ಲೇಖಕ:—

**ಗೋಪಾಳ ನಾರಾಯಣ ಕರ್ಜಗಿ,**

ಅಸಿ. ಮಾಸ್ತರ, ಗಜೇಂದ್ರಗಡ.





ಪ್ರಕಾಶಕ:—

**ವಾಯ್. ಜಿ. ಕುಲಕರ್ಣಿ,**

ಎಡಿಟರ, ಸ. ಚ, ಆನಂದವನ.





( ೨ನೆಯ ಆವೃತ್ತಿ. )

೧೯೨೬




**ಬೆಲೆ ೧೨ ಆಣೆ.** | **ಟ. ಖ. ೪ ಆಣೆ.**

# ನೀಚ ಇನಾಮದಾರ.

( ಸಾಮಾಜಿಕ ಕಾದಂಬರಿ. )




ಲೇಖಕ:—

**ಗೋಪಾಳ ನಾರಾಯಣ ಕರ್ಜಗಿ,**

ಅಸಿ. ಮಾಸ್ತರ, ಗಜೇಂದ್ರಗಡ.





ಪ್ರಕಾಶಕ:—

**ವಾಯ್. ಜಿ. ಕುಲಕರ್ಣಿ,**

ಎಡಿಟರ, ಸ. ಚ, ಆನಂದವನ.





( ೨ನೆಯ ಆವೃತ್ತಿ. )

೧೯೨೬





ಕಿಲೆ ೧೨ ಆಣೆ. ] [ ಟ. ಖ. ೪ ಆಣೆ.

# ಪ್ರಸ್ತಾವನೆ.



ಆಧುನಿಕ ಕಾಲದಲ್ಲಿ ಶ್ರೀಮಂತರಲ್ಲಿ ವಿಷಯಾಂಧತೆಯು ಬೆಳೆದು ಅವರಿಂದ ಅನನ್ವಿತ ಕೃತ್ಯಗಳಾಗಹತ್ತಿದ್ದರಿಂದ, ಕಾದಂಬರಿಕಾರರ ದೃಷ್ಟಿಯು ಅಂಥವರ ಕಡೆಗೆ ತಿರುಗಿ ಅವರಲ್ಲಿ ತಮ್ಮ ದುಷ್ಕೃತ್ಯಗಳ ಬಗ್ಗೆ ಹೇಯವುತ್ಪನ್ನವಾಗುವಂತೆ ಕಾದಂಬರಿಗಳನ್ನು ರಚಿಸಬೇಕೆಂಬ ಬುದ್ಧಿಯು ಬಂಗಾಲೀ ಕಾದಂಬರಿಕಾರರಲ್ಲಿ ವಿಶೇಷವಾಗಿ ಉತ್ಪನ್ನವಾಗಿರುತ್ತದೆ. ಆದ್ದರಿಂದ ಆ ಬಗೆಯ ಕಾದಂಬರಿಗಳು ಬಂಗಾಲೀಭಾಷೆಯಲ್ಲಿ ವಿಶೇಷವಾಗಿ ಪ್ರಸಿದ್ಧವಾಗಿರುತ್ತವೆ. ಇಂಥ ಕಾದಂಬರಿಗಳಲ್ಲಿ "ಸತೀರ ಸಿಂಧೂರ"ವೆಂಬ ಕಾದಂಬರಿಯು ಬಹು ಸರಸಾಗಿರುತ್ತದೆ. ಈ ಕಾದಂಬರಿಯ ವಾಚನದ ಲಾಭವು ನಮ್ಮ ಕನ್ನಡಿಗರಿಗೆ ಆಗಬೇಕೆಂದೂ ನಮ್ಮ ಕನ್ನಡ ಶ್ರೀಮಂತರಲ್ಲಿ ಯಾರಾದರೂ ದುಷ್ಕರ್ಮಿಗಳಿದ್ದರೆ ಅಂಶತಃ ಆದರೂ ಅವರ ದುಷ್ಕರ್ಮಪ್ರವೃತ್ತಿಯು ಕಡಿಮೆಯಾಗಲೆಂದೂ ಯೋಚಿಸಿ ಮಿ. ಗೋಪಾಳ ನಾರಾಯಣ ಕರ್ಜಗಿ ಇವರು ಈ ಬಂಗಾಲೀ ಕಾದಂಬರಿಗೆ ಕನ್ನಡ ಸ್ವರೂಪವನ್ನು ಕೊಟ್ಟಿರುತ್ತಾರೆ. ಮಿ. ಕರ್ಜಗಿ ಇವರು ಬಂಗಾಲೀಕಾದಂಬರಿಗೆ ಕನ್ನಡ ಸ್ವರೂಪ ಕೊಡುವಾಗ ಪಾತ್ರಗಳ ಹೆಸರುಗಳನ್ನು ಕನ್ನಡಿಗರಿಗೆ ಒಳಿಕೆಯಲ್ಲಿದ್ದ ಹೆಸರುಗಳನ್ನೇ ಆರಿಸಿ ಉಪಯೋಗಿಸಿದ್ದು ಅಪೂರ್ವವಾಗಿರುತ್ತದೆ.

ಪ್ರಸ್ತುತ ಕಾದಂಬರಿಯು "ನೀಚ ಇನಾಮುದಾರ" ಎಂಬ ಹೆಸರಿನಿಂದ ಸಂಬೋಧಿತವಾಗಿರುತ್ತದೆ. ಈ ಕಾದಂಬರಿಯ ಪೂರ್ಣ ವಾಚನದಿಂದ ಪ್ರಸ್ತುತದ ಹೆಸರು ಹ್ಯಾಗೆ ಅನ್ವರ್ಥಕವಾಗಿರುತ್ತದೆಂಬದು ವಾಚಕರ ನಿದರ್ಶನಕ್ಕೆ ಸಹಜವಾಗಿ ಬರಬಹುದಾಗಿದೆ. ಇನಾಮುದಾರನಾದ ಗೋವಿಂದರಾಯನು ದುರ್ಮಂತ್ರಿಯ ಸಹಾಯದಿಂದ ಅನಾಥಳಾದ ಕಮಲೆಯನ್ನು ವಶಪಡಿಸಿಕೊಳ್ಳುವದಕ್ಕೆ ದ್ರವ್ಯಾಂಧನೂ, ಕಾಮಾಂಧನೂ ಆಗಿ ಹ್ಯಾಗೆ ಹ್ಯಾಗೆ ಪ್ರಯತ್ನ ಮಾಡಿದನೆಂಬದು ಅಂಥ ಜನರಿಗೆ ಹೇಯಬುದ್ಧಿಯುತ್ಪನ್ನವಾಗುವಂತೆ ಇದರಲ್ಲಿ ವರ್ಣಿಸಲ್ಪಟ್ಟಿರುತ್ತದೆ. ಸ್ತ್ರೀಯರಿಗೆ ಸತೀತ್ವವನ್ನು ಕಾಯ್ದುಕೊಳ್ಳುವದೇ ಮೇಲಾದ ಸೌಖ್ಯವಾದ್ದರಿಂದ ಅದರ ಸಲುವಾಗಿ ಅವರು ಎಂಥ ವಿಪತ್ತುಗಳನ್ನಾದರೂ ಸಹಿಸುವರೆಂಬದು ಕಮಲೆಯ ಉದಾಹರಣೆಯಿಂದ ಸ್ಪಷ್ಟವಾಗುವಂತೆ ಲೇಖಕರು ಪ್ರಯತ್ನಪಟ್ಟಿರುತ್ತಾರೆ. ಮೊದಮೊದಲು ದುರ್ಜನರು ತಮ್ಮ ದುಷ್ಕೃತ್ಯಗಳಿಂದ ಚಲ್ಲಾಟ

ವಾಡಿದರೂ ಮುಂದೆ ಅವರ ಗತಿ ಏನಾಗುತ್ತದೆಂಬದೂ ಸಾತ್ವಿಕರು ಮೊದಲು ಕಷ್ಟಬಟ್ಟರೂ ಕೊನೆಗೆ ಸೌಖ್ಯ ಹೊಂದುವರೆಂಬದೂ ಬಹು ಮಾರ್ಮಿಕವಾಗಿ ವರ್ಣಿಸಲ್ಪಟ್ಟಿದ್ದರಿಂದ ವಾಚಕರಿಗೆ ಈ ಕಾದಂಬರಿಯು ಬಹು ಬೋಧಪ್ರದ ವಾಗಿರುವದು.

ಪಿ. ಕರ್ಜಗಿ ಇವರು ಕಾದಂಬರಿಯ ವಿಷಯವನ್ನು ಶಕ್ಯವಿದ್ದಮಟ್ಟಿಗೆ ಸವಿಕಟ್ಟಾಗುವಂತೆ ಮಾಡಿದ್ದಲ್ಲದೆ ಭಾಷೆಯನ್ನೂ ಬಹುಸರಳವಾಗಿ ಪ್ರಯೋಗಿಸಿ ರುವರು. ಇದಲ್ಲದೆ ಇವರು ಏನೂ ಪ್ರತಿಫಲದ ಆಶೆಯಿಲ್ಲದೆ ಸದ್ಬೋಧ ಚಂದ್ರಿ ಕೆಗೆ ಈ ಉತ್ತಮ ಪುಸ್ತಕವನ್ನು ಕೃತಾರ್ಥವಾಗಿ ಬರೆದುಕೊಟ್ಟದ್ದರಿಂದ, ಚಂದ್ರಿ ಕೆಯು ಏನು ಕೊಡದಿದ್ದರೂ ಅವರ ಪರೋಪಕಾರ ಬುದ್ಧಿಗಾಗಿ ದೇವರು ಅವ ರಿಗೆ ತಪ್ಪದೆ ಪ್ರತಿಫಲಕೊಡದೆ ಇರಲಾರನು! ನಮ್ಮ ಪ್ರಿಯ ವಾಚಕರು ಈ ಪುಸ್ತಕವನ್ನು ಪೂರಾ ಓದಿ ಫಲಿತಾಂಶವನ್ನು ಧ್ಯಾನದಲ್ಲಿಟ್ಟುಕೊಂಡರೆ, ಚಂದ್ರಿ ಕೆಯ ಶ್ರಮವೂ ಲೇಖಕರ ಶ್ರಮವೂ ಸಾರ್ಥಕವಾಗುವವು. ಇಷ್ಟೇ ನಮ್ಮ ವಾಚಕರಲ್ಲಿ ಪ್ರಾರ್ಥಿಸಿ ಈ ಪ್ರಸ್ತಾವನೆಯನ್ನು ಮುಗಿಸುವೆವು.

ವಿಧೇಯ,

ಶ್ರೀ ಕ್ಷೇತ್ರ ಆನಂದವನ
ತಾ|| ೨೭-೨-೨೧

ಆರ್. ಟಿ. ಕರ್ಪೂರ,
ಸಬ್‌ಎಡಿಟರ, ಸ. ಚ.



# ೨ನೆಯ ಆವೃತ್ತಿಯು.



ಒಂದೇವರುಷದಲ್ಲಿ ಈ ಕಾದಂಬರಿಯು ೨ನೆಯ ಆವೃತ್ತಿಯನ್ನು ತೆಗೆಯುವ ಪ್ರಸಂಗಬಂದದ್ದಕ್ಕಾಗಿ ನಮಗೆ ತುಂಬಾ ಸಂತೋಷವಾಗುತ್ತದೆ. ಇದರಿಂದ ಈ ಕಾದಂಬರಿಯು ಎಷ್ಟು ಲೋಕಪ್ರಿಯವಾಗಿರುವದೆಂಬದನ್ನು ಬೇರೆ ಹೇಳುವ ಕಾರಣವಿಲ್ಲ. ಈ ಆವೃತ್ತಿಯು ತಿದ್ದುಪಡಿ ಹೊಂದಿದ್ದರಿಂದ ಹೆಚ್ಚು ಲೋಕ ಪ್ರಿಯವಾಗುವದೆಂಬದರಲ್ಲಿ ಸಂದೇಹವಿಲ್ಲ. ತಾ|| ೨೮-೮-೨೭.

ಪ್ರಕಾಶಕ.

# ನೀಚ ಇನಾಮದಾರ.



## [೧]

....



"ಅಪ್ಪಾ!"

"ಕಮಲೇ, ಯಾಕೆ?"

"ದೇವರು ನಿಜವಾಗಿಯೂ ಇರುವನೇನು?"

"ಛೀ! ಹುಚ್ಚೀ, ಹೀಗೆ ದೇವರ ವಿಷಯದಲ್ಲಿ ಸಂಶಯಪಟ್ಟರೆ, ಪಾಪಬರುವದು; ಮತ್ತು ಇಂಥ ಪಾಪಕ್ಕೆ ಪ್ರಾಯಶ್ಚಿತ್ತವು ಸಹ ಇಲ್ಲ."

"ಹಾಗಾದರೆ ದೇವರನ್ನು ನಾವಿಬ್ಬರೂ ಹಗಲೂ-ರಾತ್ರಿ ಒಂದೇಸವನೇ ಸ್ಮರಿಸುತ್ತೇವೆ. ಹೀಗಿದ್ದು ನಮಗೇಕೆ ಇಷ್ಟು ಕಷ್ಟವು?"

"ನಮ್ಮ ಈ ದುಃಖ-ಕಷ್ಟಗಳು ದೇವರಿಂದ ಒಂದಿಲ್ಲ; ಅವು ನಮ್ಮ ಪಾಪದ ಫಲಗಳು."

"ಅಪ್ಪಾ, ತಿಳಿದಾಗಲಿ ತಿಳಿಯದಾಗಲಿ ನಾವಿಬ್ಬರೂ ಯಾವ ಪಾಪದ ಕೆಲಸವನ್ನೂ ಮಾಡಿಲ್ಲವಲ್ಲ!"

"ನೀನು ಯಾತರ ಮೇಲಿಂದ ಹೀಗೆ ಹೇಳುತ್ತೀ? ಈ ಜನ್ಮದಲ್ಲಿ ಮಾಡಿರದಿದ್ದರೂ ಹಿಂದಿನ ಜನ್ಮದ ಪಾಪವನ್ನು ಅನುಭವಿಸಬೇಕಲ್ಲವೇ?"

"ಅಪ್ಪಾ, ಈಗ ಸ್ವಲ್ಪ ತಿಳಿಯಿತು; ಆದರೆ........"

"ಕಮಲೆ, ಆದರೆ ಏನು?"

"ಮನೆಯಲ್ಲಿ ಈಗ ಅಡಿಗೆಗೆ ಒಂದು ಕಾಳು ಅಕ್ಕಿ ಸಹ ಇಲ್ಲವಲ್ಲ! ಮುಂದೆ ಹೇಗೆ?"

"ಈ ಚಿಂತೆಯು ನಮಗೇನೂ ಹೊಸದಲ್ಲ. ಇಷ್ಟು ದಿವಸ ಸಾಗಿದಂತೆ ಇನ್ನು ಮುಂದಾದರೂ ಸಾಗೇ ಸಾಗುವದು. ನೀನು ಆ ಅಕ್ಕಿಯ ಚಿಂತೆಯನ್ನು ಬಿಟ್ಟು, ದೇವರ ಧ್ಯಾನವನ್ನು ಮಾಡು. ಆ ದಯಾಮಯ ಪರಮಾತ್ಮನು ನಮ್ಮ

ಈ ಕ್ಷುದ್ರ ಕೊರತೆಗಳನ್ನು ದೂರಮಾಡುವನು. ಈ ವಿಶಾಲವಾದ ಜಗತ್ತಿನಲ್ಲಿ ಅವನು ಯಾರನ್ನೂ ಉಪವಾಸವಿರಗೊಡುವದಿಲ್ಲ.''

"ಅವ್ವಾ, ದೇವರಲ್ಲಿ ನಿನಗೆ ಎಂಥ ದೃಢ ವಿಶ್ವಾಸವಿರುವದಲ್ಲ! ನಿನ್ನ ಹೊಟ್ಟೆಯಲ್ಲಿ ನಾನೆಂಥ ನಿರ್ಭಾಗ್ಯಳು ಹುಟ್ಟಿದೆನು!''

ಕಮಲೆಯ ಬಾಯಿಂದ ಮಾತುಗಳೇ ಹೊರಡದಾದವು; ಕಣ್ಣುಗಳು ಅಶ್ರುಪೂರ್ಣವಾದವು. ಅವಳು ತಾಯಿಯನ್ನು ಕುರಿತು—ಅವ್ವಾ, ನಿನ್ನ ಹೇಳಿಕೆಯಂತೆ ನಾನು ಆ ಭಗವಂತನನ್ನೇ ಪ್ರಾರ್ಥಿಸುವೆನು, ಎಂದು ಅಲ್ಲಿಂದ ಎದ್ದು ದೇವರ ಮನೆಗೆ ಹೋದಳು; ಮತ್ತು ದೇವರ ಮಂಟಪದ ಎದುರಿಗೆ ವಿನಯದಿಂದ ಕೈಜೋಡಿಸಿಕೊಂಡು ಅಸ್ಫುಟ ಸ್ವರದಿಂದ:—"ನಾರಾಯಣಾ, ಜನಾರ್ದನಾ, ದಯಾಮಯಪ್ರಭೋ, ನಿನ್ನ ವಿಷಯದಲ್ಲಿ ಅವಿಶ್ವಾಸವನ್ನು ತಾಳಿ, ನಾನು ಅಪರಾಧಿನಿಯಾಗಿದ್ದೇನೆ. ದೇವಾ, ಇದು ನನ್ನ ತಿಳುವಳಿಕೆಯಿಂದಾದ ತಪ್ಪಲ್ಲ. ಸಂಸಾರದ ತಾಪದಿಂದ ಹೀಗೆ ಆಗಿದೆ. ನಾನು ಈ ಜಗತ್ತಿನೊಳಗಿನ ಯಾವ ಸುಖವನ್ನೂ ಬಯಸುವದಿಲ್ಲ. ಹೊಟ್ಟೆಯ ಸಲುವಾಗಿ ಎರಡನೆಯವರ ಮನೆಯ ಬಾಗಿಲಿಗೆ ಹೋಗುವ ಪ್ರಸಂಗವು ಮಾತ್ರ ಬರದಂತೆ ಮಾಡು. ಇಷ್ಟೇ ನನ್ನ ಬೇಡಿಕೆಯು; ಮತ್ತು ನಿನ್ನ ವಿಷಯದಲ್ಲಿ ಇನ್ನೊಮ್ಮೆ ಅವಿಶ್ವಾಸ ಉಂಟಾಗದಂಥ ಸುಬುದ್ಧಿಯನ್ನು ನನಗೆ ಕೊಡು,'' ಎಂದು ಪ್ರಾರ್ಥಿಸಿದಳು. ಅವಳ ಸುಂದರವಾದ ಕಣ್ಣುಗಳಲ್ಲಿ ಭಕ್ತಿರಸಪೂರಿತ ಅಶ್ರುಗಳು ಆಡಿದವು. ಸೆರಗಿನಿಂದ ಕಣ್ಣು ಒರಸಿಕೊಂಡು ಇನ್ನೂ ಏನೇನೋ ಬೇಡಿಕೊಳ್ಳಬೇಕೆನ್ನುತ್ತಿದ್ದಳು. ಅಷ್ಟರಲ್ಲಿ....

ಅವಳ ತಾಯಿಯಾದ ಗಂಗಾಬಾಯಿಯು:—ಕಮಲೇ, ಕಮಲೇ, ಬೇಗ ಹೊರಗೆ ಬಾ; ಯಾರು ಬಂದಿರುವರು ನೋಡು, ಎಂದು ಒದರಿದಳು. ಕೂಡಲೆ ಕಮಲೆಯು ಹೊರಗೆ ಬಂದಳು. ಸೋದರಸಮಾನನಾದ ಬಸವಂತನು ತಾಯಿಯ ಸಂಗಡ ಮಾತಾಡುತ್ತ ಕುಳಿತಿದ್ದನು. ಬಸವಂತನು ಜಾತಿಯಿಂದ ಸಿಂಪಿಗನು (ಕ್ಷತ್ರಿಯನು). ಕಮಲೆಯ ತಂದೆಯು ಚಲೋ ಸ್ಥಿತಿಯಲ್ಲಿದ್ದಾಗ್ಗೆ ಬಸವಂತನ ತಂದೆಯಾದ ರಾಮಪ್ಪನು ಅವನ ನಂಬಿಗೆಯ ರೈತನಾಗಿದ್ದನು. ರಾಮಪ್ಪನಿಗೆ ಬಸವಂತನು ಒಬ್ಬನೇ ಮಗನು. ಬಸವಂತನು ಚಿಕ್ಕಂದಿನಲ್ಲಿ ಕಮಲೆಯವರ ಮನೆಯಲ್ಲಿಯೇ ಉಂಡು, ತಿಂದು ಬೆಳೆದವನಾದ್ದರಿಂದ ಕಮಲೆಯನ್ನು ಸೋದರಳಂತೆ ಭಾವಿಸಿ, ಬಹಳ ವಿನಯದಿಂದ ನಡಕೊಳ್ಳುತ್ತಿದ್ದನು. ಕಮ

ಲೆಯು ಹೊರಗೆ ಬಂದಬಳಿಕ—ಅವ್ವಾ, ನನ್ನನ್ನು ಯಾಕೆ ಕರೆದಿ? ಎಂದು ಕೇಳಿದಳು.

ಗಂಗಾಬಾಯಿ—ಬಸವಂತನು ಗೌರೀಪುರದಿಂದ ಒಬ್ಬ ರೈತನ ಕಡೆಯಿಂದ ಬರತಕ್ಕ ಹಿಂದಿನ ಬಾಕೀ ವಸೂಲು ಮಾಡಿಕೊಂಡು ಬಂದಿರುವನು; ಇಕೋ ಈ ಹತ್ತು ರೂಪಾಯಿಗಳನ್ನು ತೆಗೆದು ಇಡು. ಈಗ ಸ್ವಲ್ಪಹೊತ್ತಿನ ಹಿಂದೆ ಅಕ್ಕಿಯ ಬಗ್ಗೆ ಚಿಂತೆ ಮಾಡುತ್ತಿದ್ದೆಯಲ್ಲವೇ? ನನಗಂತೂ ಹೀಗೆ ತೋರುತ್ತದೆ—"ನೀನು ದೀನದಯಾಳುವಾದ ಶ್ರೀಹರಿಯು ಮುಂದೆ ನಿನ್ನ ಕಷ್ಟವನ್ನು ಅರಿಕೆ ಮಾಡಿಕೊಂಡದ್ದರಿಂದ ಈ ಹಣವನ್ನು ಆತನೇ ಕಳುಹಿಸಿರುವನು."

ದೇವರು ಅನಾಥಬಂಧುವೆಂಬದು ಕಮಲೆಯ ಮನಸ್ಸಿಗೆ ನಂಬಿಗೆಯಾಯಿತು; ಮತ್ತು ಅವಳ ಮುಖದ ಮೇಲೆ ಸಾತ್ವಿಕವಾದ ಆನಂದಕಳೆಯೂ ಬಂದಿತು.

ದೇವರಮೇಲೆ ವಿಶ್ವಾಸ ಹುಟ್ಟಿದರೂ, ಅಕಸ್ಮಾತ್ತಾಗಿ ದೊರೆತ ಈ ಹಣದ ಬಗ್ಗೆ ಅವಳ ಮನಸ್ಸಿನಲ್ಲಿ ಸಂಶಯು ಬಂದಿತು. ಗೌರೀಪುರವು ಬಹಳ ದೂರದಲ್ಲಿದ್ದು, ಅಲ್ಲಿ ಬರತಕ್ಕ ಹಣವೂ ಇಲ್ಲವೆಂದು ಅವಳ ಮನಸ್ಸಿಗೆ ಸಂಶಯುಬಂದಿತು. ಬಸವಂತನು ರೈತರಿಂದ ಬರತಕ್ಕ ಹಣವನ್ನು ಈ ಮೊದಲು ಹಲವುಸಾರೆ ತಂದು ಕೊಟ್ಟಿದ್ದನು; ಆದರೆ ಗೌರೀಪುರದ ಹೆಸರು ಸಹ ಆಗ ಹೊರಟಿದ್ದಿಲ್ಲ. ಇದಲ್ಲದೆ ತಂದೆಯು ಮರಣದ ತರುವಾಯು ಗೌರೀಪುರದಿಂದ ಹಣವು ಬಂದದ್ದು ಅವಳಿಗೆ ಗೊತ್ತು ಇದ್ದಿಲ್ಲ. ಇವರ ಬಡತನ ಸ್ಥಿತಿಯನ್ನು ನೋಡಿ ಬಸವಂತನು ಎಷ್ಟೋ ಸಾರೆ ಸುಳ್ಳು ಮಾತಿನಿಂದ ಅವರ ಬಾಕಿ, ಇವರ ಬಾಕಿ ಎಂದು ಭತ್ತ, ಜೋಳ ಮುಂತಾದ ಧಾನ್ಯಗಳನ್ನೂ ರೋಖು ಹಣವನ್ನೂ ತಂದು ಕೊಟ್ಟಿದ್ದನು. ಅದು ಕಮಲೆಗೆ ಗೊತ್ತಾಗಿತ್ತು. ಆದ್ದರಿಂದ ಈ ಹತ್ತುರೂಪಾಯಿಗಳೂ ಹಾಗೇ ಬಂದಂಥವು ಇರಬಹುದೇನೆಂದು ಮನಸ್ಸಿನಲ್ಲಿ ಯೋಚಿಸಹತ್ತಿದಳು. ಆಗ ಅವಳು—"ಬಸವಂತಾ, ಈ ರೂಪಾಯಿಗಳು ಯಾವ ಊರವೆಂದು ಹೇಳಿದಿ?"

ತೀಕ್ಷ್ಣಬುದ್ಧಿಯುಳ್ಳ ಬಸವಂತನು ಕಮಲೆಯ ಈ ಪ್ರಶ್ನೆಯ ಮರ್ಮವನ್ನು ತಿಳಿದು ಮನಸ್ಸಿನಲ್ಲಿ—"ನನ್ನ ಮನಸ್ಸಿನಲ್ಲಿಯ ಗುಪ್ತ ಸಂಗತಿಯನ್ನು ಹೊರಗೆಡವಬೇಕೆನ್ನುತ್ತೀಯಾ? ಎಂದಿಗೂ ಆಗದು." ಎಂದು ಗಂಭೀರ ಭಾವವನ್ನು ತಾಳಿ—ಗೌರೀಪುರದಲ್ಲಿ ಬೇಲೂರ ಚನ್ನಪ್ಪನೆಂಬ ಒಬ್ಬ ರೈತನಿರುವನು. ಹೋದಸಾರೆ ಬೆಳೆ ಬರಲಿಲ್ಲವೆಂದು ಅವನು ಹಣ ಕೊಡಲಿಲ್ಲ; ಈ ಸಾರೆ ಅಪ್ಪನು

ಹೋಗಿ ಹತ್ತು ರೂಪಾಯಿಗಳನ್ನೂ ಅರ್ಧಚೀಲಿ ಭತ್ತವನ್ನೂ ತಂದಿರುವನು. ಅಕ್ಕಾ, ಎಲ್ಲ ರೈತರ ಗುರುತು ನಿನಗಿರುವದಿಲ್ಲ, ಎಂದನು.

ಭತ್ತದ ಚೀಲದಕಡೆಗೆ ನೋಡಿ ಕಮಲೆಯು—ಇಷ್ಟು ಒಜ್ಜೆಯನ್ನು ನೀನೇ ಹೊತ್ತುಕೊಂಡು ಬಂದೆಯೇನು? ಬಹಳ ಶ್ರಮನಾಗಿರಬಹುದು; ಇಂದು ಇಲ್ಲೇ ಊಟ ಮಾಡು, ಎಂದಳು.

ಬಸವಂತನು ನಗುತ್ತ—ಅಕ್ಕಾ, ನಾವು ಮನೆಯಲ್ಲಿ ಉಣ್ಣುವದಾದರೂ ನಿಮ್ಮದೇ ಅಲ್ಲವೇ? ಇಂದು ಮನೆಗೆ ಬೀಗರು ಬಂದಿರುವರು. ಆದ್ದರಿಂದ ಇಲ್ಲಿ ಊಟ ಮಾಡುವದು ಗೌಣವಾಗುವದು, ಎಂದು ಹೇಳಿ ಎದ್ದು ನಿಂತು, ಇಬ್ಬರಿಗೂ ನಮಸ್ಕಾರ ಮಾಡಿ ಹೊರಟನು.

ಕಮಲೆಯ ತಂದೆಯ ಮನೆಯು ಇದ್ದ ಊರು ರಾಮಪುರವು, ಅದರ ಹತ್ತರದಲ್ಲಿ ಅರ್ಧಮೈಲಿನೊಳಗೆ ಕೃಷ್ಣಪುರವೆಂಬ ಊರು ಇದ್ದು, ಬಸವಂತನ ಮನೆಯು ಅಲ್ಲಿ ಇತ್ತು; ಬಸವಂತನ ತಂದೆಯಾದ ರಾಮಪ್ಪನು ಆ ಹಳ್ಳಿಯ ಪ್ರಮುಖರಲ್ಲಿ ಒಬ್ಬನು; ಅವನು ೧೫-೨೦ ಕೂರಿಗೆ ಜಮೀನು ಮಾಡಿಕೊಂಡು ಸುಖದಿಂದ ಇದ್ದನು. ರಾಮಪ್ಪನು ಈ ಸ್ಥಿತಿಗೆ ಬರಲಿಕ್ಕೆ ಕಮಲೆಯ ತಂದೆಯೇ ಕಾರಣನಾಗಿದ್ದನು. ಆದ್ದರಿಂದ ಆ ತಂದೆ-ಮಕ್ಕಳಿಬ್ಬರೂ ವಿಪತ್ತಿಗೆ ಗುರಿಯಾದ ಈ ಕುಟುಂಬಕ್ಕೆ ಹಲವು ಬಗೆಗಳಿಂದ ಸಹಾಯಮಾಡುತ್ತಿದ್ದರು.

ಬಸವಂತನು ಹೋದ ಮೇಲೆ ಕಮಲೆಯು—"ಅವ್ವಾ ಈ ರೂಪಾಯಿ ಮತ್ತು ಕಾಳು ಬಸವಂತನ ಗುಪ್ತದಾನವೆಂದು ನನಗೆ ಸಂಶಯ ಬರುತ್ತದೆ."

ಗಂಗಾಬಾಯಿ—ಹೌದು; ನನಗೂ ಹಾಗೇ ತೋರುತ್ತದೆ. ದೇವರು ಸಹಾಯವನ್ನು ಸ್ವತಃ ತನ್ನ ಕೈಯಿಂದ ಮಾಡುವದಿಲ್ಲ. ಅನ್ಯರಿಂದ ಮಾಡಿಸುವನು. ನಮ್ಮ ಈ ಸಂಕಟಕಾಲದಲ್ಲಿ ಭಗವಂತನು ಬಸವಂತನ ಮುಖದಿಂದ ಸಹಾಯ ಮಾಡಿಸಿರುವನು.

ಕಮಲೆಯು ಏನೂ ಮಾತಾಡದೆ ಬಸವಂತನ ಉದಾರ ಮನಸ್ಸನ್ನು ಹೊಗಳುತ್ತ ಅಡಿಗೆಯ ಮನೆಗೆ ಹೊರಟು ಹೋದಳು.

*

[೨]

ಕಮಲೆಯ ತಂದೆಯ ಹೆಸರು ಬಳವಂತರಾಯ. ಅವನು ರಾಮಪುರದ ದೇಸಾಯಿಯರ ಮುಖ್ಯ ಗುಮಾಸ್ತನಿದ್ದನು. ಅವನ ಉತ್ಪನ್ನವು ಚನ್ನಾಗಿ ಇದ್ದರೂ ಮಗಳ ಮದುವೆ, ವ್ರತ-ಉಪವಾಸ ಮೊದಲಾದವುಗಳಲ್ಲಿ ವಿಶೇಷ ಹಣ ಖರ್ಚು ಮಾಡಿ ಎರಡು ಸಾವಿರ ರೂಪಾಯಿ ಸಾಲಮಾಡಿದ್ದನು. ಆದ್ದರಿಂದ ಅವನ ಮರಣದ ತರುವಾಯ ಅವನ ಹೆಂಡಿರು-ಮಕ್ಕಳು ಕಷ್ಟಕ್ಕೊಳಗಾಗಬೇಕಾಯಿತು.

ಬಳವಂತರಾಯನ ಮರಣದ ಸಂಗತಿಯು ವಿಚಿತ್ರವಿರುವದು. ಬಹುಜನರು ಬಳವಂತರಾಯನು ಹಂಪಿಯಲ್ಲಿ ಮಾರಿಕಾ ಬೇನೆಯಿಂದ ಸತ್ತನೆಂದು ಅನ್ನುತ್ತಿದ್ದರು; ಊರೊಳಗಿನ ನಾಲ್ಕೆಂಟು ಜನರು ಮಾತ್ರ ಅವನು ಸತ್ತಿಲ್ಲವೆಂದೂ, ಪೋಲೀಸರ ವಾರಂಟಿನ ಭಯದಿಂದ ಸಂನ್ಯಾಸಿಯಾಗಿ ಅರಣ್ಯಸೇರಿರುವನೆಂದೂ ಹೇಳುತ್ತಿದ್ದರು. ಇನ್ನು ಅವನಮೇಲೆ ವಾರಂಟು ಯಾಕೆ ತೆಗೆದಿದ್ದರೆಂಬದು ತಿಳಿಯಬೇಕಾದರೆ ದೇಸಾಯರ ಮನೆತನದ ಇತಿಹಾಸವನ್ನು ನೋಡುವದು ಅವಶ್ಯವು.

ಈಸ್ಟ ಇಂಡಿಯಾ ಕಂಪನಿಯ ಕಾಲದಲ್ಲಿ ಹುಬ್ಬಳ್ಳಿಯಲ್ಲಿದ್ದ ಇಂಗ್ಲಿಷ ವರ್ತಕರಕೂಡ ದಲಾಲಿ ವ್ಯಾಪಾರವನ್ನು ಮಾಡಿ ನಾರಾಯಣರಾವ ದೇಸಾಯಿಯು ಬಹಳ ಹಣ ಸಂಪಾದಿಸಿದ್ದನು; ಮತ್ತು ಆ ಹಣದಿಂದ ಅವನು ಕೃಷ್ಣಪುರವೆಂಬ ತಾಲೂಕನ್ನು ನಿಜಾಮನಿಂದ ಕೊಂಡುಕೊಂಡಿದ್ದನು. ನಾರಾಯಣರಾಯನ ಹೊಟ್ಟೆಯಲ್ಲಿ ಭೀಮರಾಯನು ಹುಟ್ಟಿದನು. ಈ ಭೀಮರಾಯನ ಹೊಟ್ಟೆಯಲ್ಲಿ ರಾಮರಾಯ, ಪಾಂಡುರಂಗರಾಯ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಭೀಮರಾಯನ ಮರಣದ ತರುವಾಯ ಅವನ ಇಬ್ಬರೂ ಮಕ್ಕಳು ಕೂಡಿಯೇ ಇದ್ದು, ತಮ್ಮ ಎಲ್ಲ ಕಾರಭಾರವನ್ನು ಸಾಗಿಸಹತ್ತಿದರು; ಆದರೆ ಅದು ಬಹಳ ದಿವಸ ನಡೆಯಲಿಲ್ಲ. ಪಾಂಡುರಂಗರಾಯನು ಸಿಟ್ಟಿನ ಸ್ವಭಾವದವನು; ಅವನಿಗೆ ಅಣ್ಣನ ಹಿರಿಯತನ, ಸಮಾಜದಲ್ಲಿಯ ಗೌರವ, ಪ್ರತಿಷ್ಠೆ ಮೊದಲಾದವು ಸಹನವಾಗಲಿಲ್ಲ. ದೊಡ್ಡ ದೊಡ್ಡ ಮನೆತನಗಳು ಬೇರೆಯಾಗಲಿಕ್ಕೆ ಯಾವ ಕ್ಷುಲ್ಲಕ ಸಂಗತಿಗಳು ಕಾರಣವಾಗುವವೋ ಅಂಥ ಸಂಗತಿಗಳು ಇವರ ಮನೆಯಲ್ಲಿ ತಲೆದೋರಹತ್ತಿದವು; ಕಡೆಗೆ ಇಬ್ಬರೂ ಅಣ್ಣ-ತಮ್ಮಂದಿರು ಒಬ್ಬರ ಮೋರೆಯನ್ನು ಒಬ್ಬರು

ನೋಡದಂಥ ಪರಿಸ್ಥಿತಿಯು ಬಂದಿತು. ಸಣ್ಣವನಾದ ಪಾಂಡುರಂಗರಾಯನು ಅರ್ಧ ಹಿಸೆಯನ್ನು ತಕ್ಕೊಂಡು ಹತ್ತರದಲ್ಲಿರುವ ಹೊಸ ರಾಮಪುರವೆಂಬಲ್ಲಿ ಇರಹತ್ತಿದನು. ಇದಾದಮೇಲೆ ಇಬ್ಬರೂ ಅಣ್ಣ-ತಮ್ಮಂದಿರ ನಡುವೆ ಅನೇಕ ದಿವಾಣೀ ಫೌಜದಾರೀ ನ್ಯಾಯಗಳುಂಟಾದವು. ಆದರೂ ಅವರ ಇಚ್ಛೆಯು ತೃಪ್ತಿಯಾಗಲಿಲ್ಲ. ಮುಂದೆ ಕೆಲವು ದಿವಸಗಳ ನಂತರ ಇಬ್ಬರೂ ಒಂದೆರಡು ತಿಂಗಳ ಅಂತರದಿಂದ ಮರಣಹೊಂದಿದರು. ರಾಮರಾಯನ ಹೊಟ್ಟೆಯಲ್ಲಿ ಭುಜಂಗರಾಯ, ಪಾಂಡುರಂಗದಾಯನ ಹೊಟ್ಟೆಯಲ್ಲಿ ಗೋವಿಂದರಾಯ ಎಂಬ ಇಬ್ಬರು ಮಕ್ಕಳಿದ್ದರು; ಆ ಬಂಧುಗಳಿಬ್ಬರು ತೀರಿಕೊಂಡರೂ ಅವರ ಮನೆತನದ ದ್ವೇಷವು ಮಾತ್ರ ಹೋಗಲಿಲ್ಲ.

ರಾಮರಾಯನ ಮಗನಾದ ಭುಜಂಗರಾಯನು ತರುಣನೂ, ಸುಶಿಕ್ಷಿತನೂ, ಪರೋಪಕಾರಿಯೂ, ಸದಾಚಾರಿಯೂ ಆಗಿದ್ದನು. ಪಾಂಡುರಂಗರಾಯನ ಮಗನಾದ ಗೋವಿಂದರಾಯನೂ ತರಣನು, ಸುಶಿಕ್ಷಿತನು; ಆದರೆ ಅವಿವೇಕಿಯೂ, ಕಾಮಾಂಧನೂ ಆಗಿದ್ದನು. ಅವನು ಭುಜಂಗರಾಯನ ಸುಗುಣಗಳ ವರ್ಣನೆಯನ್ನು ಕೇಳಿ ಮನಸ್ಸಿನಲ್ಲಿ ಹೇಗಾದರೂ ಮಾಡಿ ಅವನ ಮಾನಭಂಗ ಮಾಡಬೇಕೆಂಬ ದುರಾಲೋಚನೆ ನಡಿಸಿದನು.

ಗೋವಿಂದರಾಯನು ತನ್ನ ಗ್ರಾಮದೊಳಗಿನ ಜನರ ಹೊಲ-ಮನೆಗಳನ್ನು ಜುಲುಮೆಯಿಂದ ಕಸಿದುಕೊಂಡು ಹೊರಗೆ ಹಾಕಲು, ಭುಜಂಗರಾಯನು ಅವರಿಗೆ ಹೊಲ-ಮನೆ ಕೊಟ್ಟು ತನ್ನ ಗ್ರಾಮದಲ್ಲಿ ಆಶ್ರಯಕೊಡುತ್ತಿದ್ದನು.

ಗೋವಿಂದರಾಯನು ಮದ್ಯಪಾನಿಯೂ, ಹೀನಚರಿತ್ರನೂ ಆಗಿದ್ದನು. ದೇವರು ಇವನ ನೀಚಕೃತ್ಯಕ್ಕೆ ಸಹಾಯವಾಗುವಂತೆ, ಇವನನ್ನು ವಿಧುರನನ್ನಾಗಿ ಮಾಡಿದ್ದನು. ಇವನು ಪ್ರಸಂಗಸಾಧಿಸಿ ಮನೆತನಸ್ಥ ಹೆಂಗಸರ ಮೇಲೆ ಸಹ ಬಲಾತ್ಕಾರ ಮಾಡುತ್ತಿದ್ದನು. ಇವನ ಅತ್ಯಾಚಾರ ಪೀಡಿತ ಜನರ ದೀನಸ್ವರವು ಭುಜಂಗರಾಯನ ಕಿವಿಗೆ ಬಿದ್ದರೆ ಸಾಕು, ಅವನು ತನ್ನ ಕೈಯಿಂದಾದಷ್ಟು ಸಹಾಯ ಮಾಡುತ್ತಿದ್ದನು.

ರಾವಣನಿಗೆ ಕಾಲನೇಮಿಯೂ, ದುರ್ಯೋಧನನಿಗೆ ಶಕುನಿಯೂ ಸಹಾಯಕರಿದ್ದಂತೆ, ಗೋವಿಂದರಾಯನ ದುಷ್ಕಾರ್ಯಕ್ಕೆ ರುದ್ರಪ್ಪನೆಂಬ ಗುಮಾಸ್ತನು ಸಹಾಯಕನಿದ್ದನು.

ಐದಾರು ವರ್ಷಗಳ ಹಿಂದೆ ಒಂದು ಹೊಲದ ಸಲುವಾಗಿ ಇಬ್ಬರಿಗೂ ಜಗಳ

ನಡೆದಿತ್ತು. ರುದ್ರಪ್ಪನ ಜಾಣತನದಿಂದ ಅದು ದಿವಾಣೀಸ್ವರೂಪದಿಂದ ಫೌಜದಾರೀ ಸ್ವರೂಪವನ್ನು ಹೊಂದಿತು.

ಬಳವಂತರಾಯನು ರಾಮರಾಯನ ಕಾಲದಿಂದ ಮುಖ್ಯ ಗುಮಾಸ್ತಗಿರಿ (ದಿವಾಣಗಿರಿ) ಕೆಲಸ ಮಾಡುತ್ತ ಬಂದಿದ್ದನು; ಇದಲ್ಲದೆ ಅವನು ಭುಜಂಗರಾಯನ ಬಲಗೈಯಂತೆ ಇದ್ದನು; ಆದರೆ ಅವನು ಫೌಜದಾರೀ ವಿಷಯಕ್ಕೆ ಅಂಜುತ್ತಿದ್ದನು. ಅವಿವೇಕಿಯಾದ ರುದ್ರಪ್ಪನು ಹಲವು ತರದ ನೀಚ ಪ್ರಯತ್ನಗಳಿಂದ ಮೇಲೆ ಹೇಳಿದ ಹೊಲದ ನ್ಯಾಯದಲ್ಲಿ ಜಯಹೊಂದಿದನು; ಮತ್ತು ಅವನು ಆ ಫೌಜದಾರಿಯಲ್ಲಿ ಮಾರಾಮಾರಿ, ಖೂನಿ ಮುಂತಾದ ಕಲಮುಗಳ ಮೇಲಿಂದ ಬಳವಂತರಾಯನಮೇಲೆ ವಾರಂಟು ತೆಗೆಯಿಸಿದನು. ಬಳವಂತರಾಯನು ಮರ್ಯಾದೆಗೆ ಅಂಜಿ, ತನ್ನ ಯಜಮಾನನಿಗೆ ಸಹ ತಿಳಿಸದೆ, ಗೌಪ್ಯದಿಂದ ದೇಶತ್ಯಾಗ ಮಾಡಿದನು.

ಬಳವಂತರಾಯನ ದೇಶತ್ಯಾಗದ ತರುವಾಯ ಅವನ ಕುಟುಂಬದವರು ಬಹಳ ವಿಪತ್ತಿಗೊಳಗಾದರು. ಬಡ್ಡಿಗೆ ಬಡ್ಡಿ ಬೆಳೆದು ಸಾಲವು ನಾಲ್ಕೈದುಸಾವಿರಕ್ಕೆ ಬಂದಿತ್ತು. ಸಾಲಗಾರರ ಉಪದ್ರವು ಬಹಳವಾದ್ದರಿಂದ ಗಂಗಾಬಾಯಿಯು ತಾವು ಇರುವ ಮನೆಯೊಂದರ ಹೊರತು, ಎಲ್ಲವನ್ನೂ ಸಾವುಕಾರರಿಗೆ ಬರೆದು ಕೊಟ್ಟಳು. ಬಳವಂತರಾಯನು ಬರಿಯ ಪೋಲೀಸರ ವಾರಂಟಿಗೆ ಹೆದರಿ, ಈ ಪ್ರಕಾರ ಓಡಿಹೋದನೆಂದು ಹೇಳುವಂತೆ ಇದ್ದಿಲ್ಲ. ಮನೆತನದೊಳಗಿನ ಒಂದು ಕಾರಣವು ಅವನಿಗೆ ಸಂಸಾರದಲ್ಲಿ ವಿರಕ್ತಿಯನ್ನು ಹುಟ್ಟಿಸಿತ್ತು, ಅದೇನಂದರೆ— ಅವನ ಪ್ರೀತಿಯ ಮಗಳಾದ ಕಮಲೆಯ ಗಂಡನ ಅವಿವೇಕತನದ ವರ್ತನವು.

ವರದಕ್ಷಿಣೆ ಎಂಬ ಪಿಶಾಚಿಯು ಈಗಿನಷ್ಟು ಉಗ್ರಸ್ವರೂಪದಲ್ಲಿ ಇಲ್ಲದ ಕಾಲದಲ್ಲಿ ಬಳವಂತರಾಯನು ಎರಡುಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟು, ಕುಕನೂರ ಭೀಮರಾಯರ ಮಗನಾದ ಮನೋಹರಪಂತನಿಗೆ ಮಗಳನ್ನು ಕೊಟ್ಟಿದ್ದನು. ಭೀಮರಾಯನು ಶ್ರೀಮಂತನೆಂದು ಹೆಸರಾಗಿದ್ದನು. ಬಳವಂತರಾಯನು ಮಗಳಿಗೆ ಸುಖವಾಗಬೇಕೆಂದು ನೀರಿನಂತೆ ಹಣ ವೆಚ್ಚಮಾಡಿ, ಅವರ ಕೂಡ ಈ ಶರೀರಸಂಬಂಧ ಮಾಡಿದನು; ಆದರೆ ದೈವಗತಿಯನ್ನು ತಪ್ಪಿಸುವರಾರು?

ಮನೋಹರಪಂತನು ಹೆಸರಿಗೆ ತಕ್ಕಂತೆ ಬಲು ಸುಂದರನು; ಆದರೆ ಅವನು ಎಷ್ಟು ಸುಂದರನೋ, ಅಷ್ಟೇ ದುರ್ಗುಣಿಯು. ಅವನ ನಡತೆಯು ಈ ಪ್ರಕಾರ ಇದ್ದದ್ದು ಬಳವಂತರಾಯನಿಗೆ ಗೊತ್ತಿದ್ದಿಲ್ಲ. ಗೋವಿಂದರಾವ ದೇಸಾಯಿಯರ

ಗುಮಾಸ್ತನಾದ ರುದ್ರಪ್ಪನೂ ಕುಕಸೂರವನು. ರುದ್ರಪ್ಪನು ಮೊದಲು ಬಳ ವಂತರಾಯನ ಕೈಯಲ್ಲಿ ಕಾರಕೂನನಾಗಿದ್ದನು. ಆಗ ಅವನೇ ಬಳವಂತರಾಯ ನಿಗೆ ಹೇಳಿ ಈ ಸಂಬಂಧವನ್ನು ಉಂಟುಮಾಡಿದ್ದನು.

ಲಗ್ನವಾದ ೩-೪ ತಿಂಗಳಲ್ಲಿಯೇ ಭೀಮರಾಯನು ತೀರಿಕೊಂಡನು. ಉತ್ತ ರಾಧಿಕಾರಿಯಾದ ಪಂತನು ಒಂದು ವರ್ಷದಲ್ಲಿಯೇ ತಂದೆ ಗಳಿಸಿದ ಹಣದ ಮು- ಕ್ಕಾಲು ಭಾಗವನ್ನು ಹಾಳುಮಾಡಿಬಿಟ್ಟನು. ಬಳವಂತರಾಯನು ಈ ಬಗ್ಗೆ ಅಳಿ ಯನಿಗೆ ಮೂರು-ನಾಲ್ಕು ಸಾರೆ ಸೌಮ್ಯ ರೀತಿಯಿಂದ ತಿಳಿಹೇಳಿದನು. ಒಮ್ಮೆ ಸಿಟ್ಟುಮಾಡಿ ಸಹ ಹೇಳಿದನು; ಆದರೆ ಅವನ ಉಪದೇಶವು ಡಬ್ಬುಕೊಡದ ಮೇಲೆ ನೀರು ಹಾಕಿದಂತೆ ಮಾತ್ರ ಆಯಿತು.

ಪಂತನು ಸುಂದರಿಯೂ, ಸುಗುಣೆಯೂ ಆದ ಹೆಂಡತಿಯನ್ನು ತಿರಸ್ಕರಿಸಿ, ಗದಗಿನಲ್ಲಿ ಒಬ್ಬ ವೇಶ್ಯಾಸ್ತ್ರೀಯ ಸಹವಾಸದಲ್ಲಿ ಕಾಲಕಳೆಯಹತ್ತಿದನು. ಮುಂದೆ ಕೆಲವು ದಿವಸಗಳ ತರುವಾಯ ಅವನು ಮಾವನಿಗೆ ವಿನಯದಿಂದ ಪತ್ರ ಬರೆದನು. ಅದರಲ್ಲಿ ತನ್ನ ಹಿಂದಿನ ನಡತೆಯ ಬಗ್ಗೆ ಪಶ್ಚಾತ್ತಾಪವನ್ನು ತೋರಿಸಿ, ಕ್ಷಮೆ ಯನ್ನು ಬೇಡಿಕೊಂಡನು. ಈ ಪ್ರಕಾರ ಅಳಿಯನ ಪತ್ರವನ್ನು ನೋಡಿ ಬಳವಂತ ರಾಯನು ನಂಬಿ, ಕಮಲೆಯನ್ನು ಗಂಡನಮನೆಗೆ ಕಳಿಸಿದನು. ಪಂತನು ೧೫-೨೦ ದಿವಸ ಹೆಂಡತಿಯ ಸಂಗಡ ಪ್ರೇಮದಿಂದ ಇದ್ದಂತೆ ತೋರಿಸಿ, ಕಮಲೆಯ ಎಲ್ಲ ಆಭರಣಗಳನ್ನೂ ಕೈವಶಮಾಡಿಕೊಂಡು, ಬೆಳಗುಮುಂಜಾನೆ ಯಾರಿಗೂ ಹೇಳದೆ, ಗದಗಿನ ಹಾದಿಯನ್ನು ಹಿಡಿದನು.

ಪಂತನ ಮನೆಯಲ್ಲಿ ಅವನ ವೃದ್ಧ ಅತ್ತೆಯೊಬ್ಬಳು ಮಾತ್ರ ಇದ್ದಳು. ಊಟದ ಹೊತ್ತಿನತನಕ ಮಾರ್ಗ ನಿರೀಕ್ಷಣೆಮಾಡಿದರೂ, ಪಂತನು ಮನೆಗೆ ಬರ ಲಿಲ್ಲ. ಹೊತ್ತು ಮುಳುಗುವ ಮುಂದೆ ಅವರಿಬ್ಬರು ಊಟಮಾಡಿದರು. ಊಟದ ತರುವಾಯ ಆ ಮುದುಕಿಯು ಕಮಲೆಯನ್ನು ಕುರಿತು:—ತಂಗೀ, ಮನೋಹ ರನು ಇನ್ನು ಮನೆಗೆ ಬರುವದೇ ಇಲ್ಲ. ನಿನ್ನ ಒಡವೆಗಳು ಕೈಸೇರುವಂತೆ ಮಾಡಿ ಕೊಳ್ಳುವದರ ಸಲುವಾಗಿ ಅವನು ಈಗ ೧೦-೧೫ ದಿವಸ ಮನೆಯಲ್ಲಿ ಇದ್ದಂತೆ ಕಾಣುತ್ತದೆ. ಹುಡುಗನು ಕೆಟ್ಟುಹೋಗಿರುವನು. ಮಾಡುವದೇನು? ನಿಮ್ಮ ಮಾವನು ಪುಣ್ಯವಂತನಾದ್ದರಿಂದ ಮಗನ ಈ ದುಷ್ಟ ಚರಿತ್ರೆಯನ್ನು ನೋಡುವ ದಕ್ಕಿಂತ ಮೊದಲೇ ಕಣ್ಣುಮುಚ್ಚಿದನು. ನೀನು ಇನ್ನು ಇಲ್ಲಿ ಇದ್ದು ಮಾಡುವ ದಾದರೂ ಏನು? ನಾಳಿನ ದಿವಸ ನಿನ್ನನ್ನು ತವರುಮನೆಗೆ ಕಳಿಸುತ್ತೇನೆ.

ಕಮಲೆಯು ಮನಸ್ಸಿನಲ್ಲಿ—"ನಾನು ಇಲ್ಲಿ ಇರುವದೇ ಯೋಗ್ಯವು; ಎಂದಾದರೂ ಒಮ್ಮೆ ಮನೆಗೆ ಬರಲಿಕ್ಕಿಲ್ಲವೇನು?" ಎಂದು ವಿಚಾರಿಸಿದಳು; ಆದರೆ ಅದನ್ನು ಮುದುಕೆಯ ಮುಂದೆ ಹೇಳುವ ಧೈರ್ಯವಾಗಲಿಲ್ಲ. ಮುದುಕೆಯು ಕಮಲೆಯ ಮೌನವನ್ನು ಸಮ್ಮತಿಯೆಂದು ಭಾವಿಸಿ, ಮರುದಿವಸ ಒಂದು ಬಂಡಿಯನ್ನು ಮಾಡಿ, ಅವಳನ್ನು ರಾಮಪುರಕ್ಕೆ ಕಳುಹಿದಳು.

ಅಳಿಯನ ಈ ನೀಚವರ್ತನದಿಂದ ಬಳವಂತರಾಯನಿಗೆ ಬಹಳ ಕೆಡಕೆನಿಸಿತು. ಮಗಳ ಒಡವೆಗಳ ಬಗ್ಗೆ ಅವನು ಚಿಂತೆಮಾಡಲಿಲ್ಲ. ಸುಗುಣೆಯೂ, ಸುಂದರಿಯೂ ಆದ ಹೆಂಡತಿಯನ್ನು ಬಿಟ್ಟು, ವೇಶ್ಯಾಸ್ತ್ರೀಯಳ ಸಲುವಾಗಿ ಹೆಂಡತಿಯ ವಸ್ತ್ರಗಳನ್ನು ಅಪಹರಿಸುವಂಥ ಅಳಿಯನು ಸಿಕ್ಕ ತನ್ನ ದುರ್ದೈವಕ್ಕಾಗಿ ಮಾತ್ರ ಅವನಿಗೆ ಬಹಳ ವಿಷಾದವಾಯಿತು.

ಈ ಸಂಗತಿಯು ವರ್ತಿಸಿದ ಎರಡು ತಿಂಗಳಲ್ಲಿ ಇಬ್ಬರೂ ದೇಸಾಯಿಯರ ನಡುವೆ ಜಗಳ ಹುಟ್ಟಿ, ಮಾರಾಮಾರಿಯಾಗಿ ಆ ಪ್ರಕರಣದಲ್ಲಿ ರುದ್ರಪ್ಪನು ಪೋ-ಲೀಸರಿಗೆ ಲಂಚಕೊಟ್ಟು, ಬಳವಂತರಾಯನ ಮೇಲೆ ವಾರಂಟು ತೆಗೆಯಿಸಿದನು. ಪೋಲೀಸರು ಬಳವಂತರಾಯನನ್ನು ಶೋಧಮಾಡಿ, ಅವನ ಪತ್ತೆ ಹತ್ತದ್ದರಿಂದ ನಿರುಪಾಯರಾದರು. ಇತ್ತ ಭುಜಂಗರಾಯನು ಪ್ರಸಿದ್ಧ ವಕೀಲರ ಸಹಾಯದಿಂದ ಆ ಖಟ್ಲೆಯನ್ನು ಜಿಲ್ಲಾ ಕೋರ್ಟಿನಲ್ಲಿ ನಡೆಸಿದನು; ಮತ್ತು ವಿಶ್ವಾಸಿಕ ಜನರನ್ನು ಕಳಿಸಿ ಬಳವಂತರಾಯನ ಶೋಧವನ್ನು ನಡೆಯಿಸಿದನು. ಬಳವಂತರಾಯನು ಹಂಪಿಯಲ್ಲಿ ಇರುತ್ತಾನೆಂಬ ಸುದ್ದಿಯನ್ನು ಕೇಳಿ ಭುಜಂಗರಾಯನು ಸ್ವತಃ ಹಂಪಿಗೆ ಹೋದನು. ಅಲ್ಲಿ ಹೋಗಿ ವಿಚಾರ ಮಾಡಲು, ಕೆಲವು ದಿವಸಗಳ ಹಿಂದೆ ರಾಮಪುರದ ಒಬ್ಬ ಬ್ರಾಹ್ಮಣನು ಮಾರಿಕಾ ಬೇನೆಯಿಂದ ಸತ್ತನೆಂಬ ಸುದ್ದಿಯು ಹತ್ತಿತು. ನಂಬಿಗಸ್ತನೂ, ಬಹು ದಿವಸದಿಂದ ಮನೆತನದ ಸೇವೆಯನ್ನು ಮಾಡುತ್ತ ಬಂದವನೂ, ಬುದ್ಧಿವಂತನೂ ಆದ ಬಳವಂತರಾಯನ ಮರಣವಾರ್ತೆಯಿಂದ ಭುಜಂಗರಾಯನಿಗೆ ಬಹಳ ದುಃಖವಾಯಿತು.

ಬಳವಂತರಾಯನ ಪಶ್ಚಾತ್ ಅವನ ಮನೆತನದ ಸ್ಥಿತಿಯು ಬಹಳ ಶೋಚನೀಯವಾಯಿತು. ಒಂದೊಂದು ದಿವಸ ಆ ತಾಯಿ-ಮಕ್ಕಳು ಅರಹೊಟ್ಟೆ ಸಹ ಊಟ ಮಾಡುತ್ತಿದ್ದರು. ಬಸವಂತನನ್ನು ದೇವರೇ ಇವರ ಸಹಾಯಕ್ಕೆ ಹುಟ್ಟಿಸಿದಂತೆ ಆಗಿತ್ತು.

# [ ೩ ]

ಒಬ್ಬ ಪೋಷ್ಟಮನ್ನನು ಬಳವಂತರಾಯನ ಮನೆಯ ಮುಂದೆ ನಿಂತು:— "ಅಮ್ಮಾ ನಿಮ್ಮ ಪತ್ರವು ಬಂದಿದೆ, ತೆಗೆದುಕೊಳ್ಳಿರಿ," ಎಂದನು. ಪೋಷ್ಟಮನ್ನನ ಈ ಮಾತು ಕಮಲೆಯ ಕಿವಿಗೆ ಬಿತ್ತು. ತಂದೆಯ ಮರಣದ ತರುವಾಯ ಈವರೆಗೆ ಒಬ್ಬರೂ ಅವರ ಯೋಗಕ್ಷೇಮವನ್ನು ವಿಚಾರಿಸಲಿಕ್ಕೆ ಬಂದಿದ್ದಿಲ್ಲ. ಇಷ್ಟೇಅಲ್ಲ, ಒಂದು ಪತ್ರ ಸಹ ಹಾಕಿದ್ದಿಲ್ಲ. ಸುಖದ ಕಾಲದಲ್ಲಿ ಆಪ್ತೇಷ್ಟರು ಬಹಳ ಮಂದಿ; ಸಂಕಟ ಕಾಲದಲ್ಲಿ ಅವರೆಲ್ಲರೂ ಎದುರಿಗೆ ಬಂದರೆ ಮೋರೆತಿರುಗಿಸಿ ನಿಲ್ಲುವರು. ತಂದೆಯ ಮರಣದ ತರುವಾಯ ಅವರಿಗೆ ಒಂದೂ ಪತ್ರ ವಿದ್ದಿಲ್ಲ. ಕಾರಣ ಕಮಲೆಯು ಮನಸ್ಸಿನಲ್ಲಿ:—"ಈ ಪತ್ರವು ಯಾರದಿರಬಹುದು? ಅವರದಿರಬಹುದೇನು?" ಹೀಗೆ ವಿಚಾರಮಾಡುತ್ತ ಹೊರಗೆ ಬಂದು ಪತ್ರವನ್ನು ಇಸಕೊಂಡು ಒಳಗೆ ಹೋದಳು. ಗಂಗಾಬಾಯಿಯು ಮಗಳನ್ನು ಕುರಿತು— ಕಮಲಾ! ನೋಡು, ಪತ್ರವು ಯಾರದು? ಇಷ್ಟು ದಿವಸಗಳಮೇಲೆ ನಮ್ಮಂಥ ದರಿದ್ರರ ನೆನಪು ಯಾರಿಗೆ ಆಗಿದೆ?

ಬಳವಂತರಾಯನು ಮಗಳಿಗೆ ಸ್ವಲ್ಪ ಓದು-ಬರಹ ಕಲಿಸಿದ್ದನು. ಅವಳು ಆ ಪತ್ರವನ್ನು ಓದಿದಳು. ಅವಳ ಸುಂದರ ಮುಖದಮೇಲೆ ಚಿಂತೆಯ ಕಳೆಯು ಬಂದಿತು. ತಾಯಿಯು ಮಗಳ ಈ ಮುಖಲಕ್ಷಣವನ್ನು ಕಂಡು—"ಈ ಪತ್ರವು ನಿನ್ನ ಗಂಡನದು ಕಾಣುತ್ತದೆ," ಎಂದು ಕೇಳಿದಳು.

ಕಮಲೆಯು ಒಂದು ದೀರ್ಘ ನಿಟ್ಟುಸಿರುಬಿಟ್ಟು "ಹೂ" ಎಂದಳು.

ಗಂಗಾ — ಪತ್ರದಲ್ಲಿ ವಿಶೇಷ ಸಂಗತಿಯು ಏನದೆ? ಎಲ್ಲರೂ ಕ್ಷೇಮವಷ್ಟೆ?

ಕಮಲೆ—ಎಲ್ಲವೂ ಕ್ಷೇಮವದೆ; ಆದರೆ........

ಕಮಲೆಯಿಂದ ಮುಂದೆ ಮಾತಾಡುವದಾಗಲಿಲ್ಲ. ಅವಳ ಎರಡೂ ಕಣ್ಣುಗಳಲ್ಲಿ ನೀರು ಬಂದವು. ಅವಳು ದುಃಖವನ್ನು ನುಂಗಿಕೊಂಡು ಮಾತಾಡುವದಕ್ಕೆ ಪ್ರಯತ್ನಮಾಡಿದಳು; ಆದರೆ ಅವಳ ಬಾಯಿಂದ ಮಾತುಗಳೇ ಹೊರಡಲಿಲ್ಲ.

ಗಂಗಾ—"ಪತ್ರವನ್ನು ಪೂರಾ ಓದು, ನಾನು ಕೇಳುತ್ತೇನೆ."

ಕಮಲೆಯು ಪತ್ರವನ್ನು ಓದಿದಳು. ಪತ್ರವು ಕೆಳಗೆ ಬರೆದಂತೆ ಇತ್ತು:—

ಕ್ಷೇಮ,   ಶ್ರೀ   ಕುಕನೂರು.

ಪ್ರಿಯ ಕುಂಕುಮ ಸೌಭಾಗ್ಯವತಿಗೆ—

ಕಮಲೆ, ನಿನ್ನ ವಿಷಯದಲ್ಲಿ ನಾನು ಬಹಳ ಅನ್ಯಾಯ ಮಾಡಿರುವೆನು. ನನಗೆ ಈಗ ಪಶ್ಚಾತ್ತಾಪವಾಗಿದೆ. ನಾನು ೨-೩ ದಿನಗಳಲ್ಲಿ ಅಲ್ಲಿಗೆ ಬರುವೆನು. ನಾನು ಈಗ ಬಹಳ ಸಂಕಟದಲ್ಲಿರುವೆನು. ಹತ್ತಿರ ಒಂದು ಪೈ ಸಹ ಇಲ್ಲ. ಸ್ವರ್ಗಸ್ಥ ಮಾವನು ಬಹಳ ಹಣ ಕೂಡಿಸಿಟ್ಟು ಸತ್ತಿರುವನೆಂದು ಕೇಳಿರುವೆನು. ಈ ಪ್ರಸಂಗ ದಲ್ಲಿ ನಿನ್ನಿಂದ ನನಗೆ ಸ್ವಲ್ಪ ಹಣದ ಸಹಾಯವಾದೀತೆಂದು ನಂಬಿರುವೆನು. ಸಮ ಕ್ಷಮಭೆಟ್ಟಿಯಲ್ಲಿ ಎಲ್ಲವೂ ತಿಳಿಯುವದು. ಇತಿ ಪ್ರೇಮಪೂರ್ವಕ ಆಶೀರ್ವಾದ

ನಿಮ್ಮ ಮನೋಹರಪಂತ.

ಅಳಿಯನ ಪತ್ರವನ್ನು ಕೇಳಿ ಗಂಗಾಬಾಯಿಯ ಮನಸ್ಸಿನಲ್ಲಿಯೂ ಅನೇಕ ವಿಚಾರಗಳು ಹುಟ್ಟಹತ್ತಿದವು. ಈ ದರಿದ್ರ ಸ್ಥಿತಿಯಲ್ಲಿ ಅಳಿಯನ ಪತ್ರವು ಅವಳಿಗೆ ಮನೋವ್ಯಥೆಯನ್ನುಂಟು ಮಾಡಿದ್ದು ಆಶ್ಚರ್ಯವಲ್ಲ. ಆಗ ಅವಳು ಮಗಳನ್ನು ಕುರಿತು—"ಹಾಗಾದರೆ ಮುಂದೆ ಹೇಗೆ ಮಾಡಬೇಕು?" ಎಂದು ಕೇಳಿದಳು.

ಕಮಲೆಯು ಗಂಭೀರ ಭಾವದಿಂದ—"ಅವ್ವಾ! ಈ ಪ್ರಸಂಗದಲ್ಲಿ ಭಗ ವಂತನೇ ನಮಗೆ ಮಾರ್ಗ ತೋರಿಸಬೇಕು. ನಮ್ಮ ಈ ದೈನ್ಯಾವಸ್ಥೆಯನ್ನು ನೋಡಿದರೆ ಅವರಿಗೂ ದಯ ಹುಟ್ಟಬಹುದು" ಎಂದು ಹೇಳಿದಳು. ಬಹಳ ದಿವ ಸದ ತರುವಾಯ ಪತಿಯು ಬರುವನೆಂಬ ಸುದ್ದಿಯನ್ನು ಕೇಳಿ ಅವಳ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು.

ಕಮಲೆಗೆ ಈಗ ೧೭ ವರ್ಷ ಪೂರಾ ತುಂಬಿದ್ದವು. ಅವಳ ತಾರುಣ್ಯದ ಕಾಂತಿಯು ಅವಳ ಎಲ್ಲ ಅವಯವಗಳೊಳಗಿಂದಲೂ ತುಂಬಿ ಹೊರಚಲ್ಲುತ್ತಿತ್ತು. ಬಹು ದಿವಸ ಪತಿಯ ವಿರಹದಿಂದ ಬೆಂದ ಅವಳಿಗೆ ಪತಿಯ ಆಗಮನದ ಸುದ್ದಿಯು, ಭಿಕ್ಷುಕನಿಗೆ ಮೃಷ್ಟಾನ್ನ ಭೋಜನದ ಆಮಂತ್ರಣ ಸಿಕ್ಕಂತೆ ಆಯಿತು. ಭಾವೀ ಸುಖದ ಕಲ್ಪನೆಯಲ್ಲಿ ಎರಡು ದಿವಸಗಳು ಕಳೆದವು. ಅವಳು ಈ ವೊದಲು ತನ್ನ ಕೂದಲುಗಳ ಕಡೆಗೆ ಲಕ್ಷ ಕೊಡುತ್ತಿದ್ದಿಲ್ಲ. ಈಗೆರಡು ದಿವಸ ಅವಳು ಎಣ್ಣೆ ಹಚ್ಚಿ ಹೆಳಲು ಹಾಕಿಕೊಳ್ಳಲು ಪ್ರಾರಂಭಿಸಿದಳು. ಮುಖವನ್ನು ತಿಕ್ಕಿ ತಿಕ್ಕಿ ತೊಳಕೊಳ್ಳಹತ್ತಿದಳು. ಅವಳು ವೊದಲೇ ಸುಂದರಳು, ಈ ಕೃತ್ರಿಮ ಉಪಾಯಗಳಿಂದ ಮತ್ತಿಷ್ಟು ಸುಂದರಳಾಗಿ ತೋರಹತ್ತಿದಳು.

ಮೂರನೆಯ ದಿವಸ ಹಗಲು ಮೂರನೇ ಪ್ರಹರದ ಅಂತಿಮಸಮಯದಲ್ಲಿ ಪಂತನ ಆಗಮನವಾಯಿತು. ಗಂಗಾಬಾಯಿಯು ನಡುಮನೆಯಲ್ಲಿ ಕುಳಿತಿದ್ದಳು. ಅವಳು ಅಳಿಯನನ್ನು ನೋಡಿ ಎದ್ದು ನಿಂತು "ಒಳಗೆ ಬರ್ರಿ; ಇಷ್ಟು ದಿವಸಗಳ ಮೇಲಾದರೂ ನಮ್ಮ ನೆನಪಾಯಿತು" ಎಂದಳು. ಪಂತನು ಅತ್ತೆಗೆ ನಮಸ್ಕಾರ ಮಾಡಿ, ಎಲ್ಲರೂ ಕ್ಷೇಮವಷ್ಟೆ? ಎಂದು ಕೇಳಿದನು.

ಮಾವನು ಸತ್ತಮೇಲೆ ಪಂತನಿಗೆ ಇದೇ ಮೊದಲು ಅತ್ತೆಯ ಭೆಟ್ಟಿಯು. ಈ ಪ್ರಸಂಗದಲ್ಲಿ ಅತ್ತೆಯ ಸಂಗಡ ಈ ಪ್ರಕಾರದ ಔಪಚಾರಿಕ ಕುಶಲಪ್ರಶ್ನೆಯು!

ಪಂತನು ನಾಲ್ಕೂ ಕಡೆಗೆ ದಿಟ್ಟಿಸಿ ನೋಡಿದನು. ಗೋಡೆಗಳಿಗೆ ಬಹು ದಿವಸದ ಪೂರ್ವದಲ್ಲಿ ಹಚ್ಚಿದ ಬಣ್ಣ-ಸುಣ್ಣಗಳು ಮಲಿನವಾಗಿ ಮತ್ತು ಅಲ್ಲಿಂದಲ್ಲಿ ಉದುರಿ, ನೋಡುವವರಿಗೆ ಸದ್ಯದ ದರಿದ್ರಸ್ಥಿತಿಯನ್ನು ವ್ಯಕ್ತಗೊಳಿಸುತ್ತಿದ್ದವು. ಗೋಡೆಗಳ ಕಸತೆಗೆಯದೆ ಬಹಳ ದಿವಸಗಳಾದ್ದರಿಂದ ಅಲ್ಲಲ್ಲಿ ಜೇಡಗಳು ತಮ್ಮ ಬಲೆಯನ್ನು ಬೇಕಾದ ಹಾಗೆ ಪಸರಿಸಿದ್ದವು. ಪಂತನು ಅದನ್ನೆಲ್ಲ ನೋಡುತ್ತ ಉದಾಸೀನತೆಯಿಂದ ಅತ್ತೆಯು ತೋರಿಸಿದ ಒಂದು ಕೋಣೆಯೊಳಗೆ ಹೋಗಿ ಕುಳಿತನು. ಅವನು ಮನಸ್ಸಿನಲ್ಲಿ—"ನಾನೆಂಥ ಹುಚ್ಚನು? ಪೂರ್ಣ ವಿಚಾರ ಮಾಡದೆ ನಾಯಲಿಕ್ಕೆ ಇಲ್ಲಿಗೇಕೆ ಬಂದೆನು? ಮನೆಯೊಳಗೆ ಬರದೆ ಹಾಗೇ ತಿರುಗಿ ಹೋಗುವ ಬುದ್ಧಿ ನನಗೇಕೆ ಹುಟ್ಟಿರಲಿಕ್ಕಿಲ್ಲ? ಎಂದನು. ಮತ್ತೆ ಅವನು—ಬಂದ ಮೇಲೆ ತಿರುಗಿ ಹೋಗುವದು ಉಚಿತವಲ್ಲ; ಬಂದ ಕೆಲಸಕ್ಕೆ ಪ್ರಯತ್ನ ಮಾಡೋಣ, ಇದರ ಮೇಲೆ ನನ್ನ ದೈವವು" ಎಂದು ಸಮಾಧಾನ ತಾಳಿದನು.

ಬಸವಂತನು ಕೊಟ್ಟ ಹತ್ತು ರೂಪಾಯಿಗಳಲ್ಲಿ ಇನ್ನೂ ೬-೭ ರೂಪಾಯಿಗಳು ಉಳಿದಿದ್ದವು. ಆದ್ದರಿಂದ ಅಳಿಯದೇವರ ಮೇಜವಾನಿಗೆ ಕೊರತೆ ಬರಲಿಲ್ಲ. ಬಡತನದ ತವರುಮನೆಯಂತೆ ತೋರುವ ಆ ಮನೆಯಲ್ಲಿ ಅಂದಿನ ದಿವಸದ ರಾತ್ರಿ ಸುವಾಸನೆಯುಳ್ಳ ಸಣ್ಣಕ್ಕಿಯ ಅನ್ನ, ಹಾಲು-ಸಕ್ಕರೆಯಿಂದ ಕೂಡಿದ ಶಾವಿಗೆಯ ಪಾಯಸ, ಅದೇ ಕಾಸಿದ ತುಪ್ಪ, ಹಪ್ಪಳ, ಸಂಡಿಗೆ ಮೊದಲಾದ ಸುಗ್ರಾಸ ಭೋಜನ ಸಾಹಿತ್ಯವು ಪಂತರ ಸಲುವಾಗಿ ಸಿದ್ಧವಾಯಿತು.

ಆ ಶ್ರೀಮಂತಿಕೆಯ ಊಟವನ್ನು ನೋಡಿ ಪಂತನು ಮನಸ್ಸಿನಲ್ಲಿ—ನಾನು ಬಂದ ಕೂಡಲೆ ಸಿಟ್ಟಾಗಿ, ತಿರುಗಿ ಹೋಗದೆ ಇದ್ದದ್ದು ಚಲೋದಾಯಿತು. ಇವರ ಸ್ಥಿತಿಯು ಹೊರಗಿನಿಂದ ನೋಡಲಿಕ್ಕೆ ಬಡತನದ್ದಾಗಿ ತೋರಿದರೂ, ಇವರಲ್ಲಿ ಹಣ

ವಿರಲಿಕ್ಕೇ ಬೇಕು. ಇಲ್ಲದಿದ್ದರೆ ಇಂದಿನ ದಿವಸ ಇಷ್ಟೆಲ್ಲ ಸಿದ್ಧತೆಯನ್ನು ಹೇಗೆ ಮಾಡುವರು?

ಪಂತನು ಊಟಮಾಡಿ ಕೋಣೆಯೊಳಗೆ ಹಾಸಿದ ಹಾಸಿಗೆಯ ಮೇಲೆ ಕುಳಿತನು. ನಂತರ ತನ್ನ ಚಿಲಿಮೆಯನ್ನು ಹೊರಗೆ ತೆಗೆದು, ತಂಬಾಕವನ್ನು ಮಿದ್ದಿ ಸಿದ್ಧಮಾಡಿ ಚಿಲಿಮೆಯಲ್ಲಿ ಹಾಕಿ ಅದನ್ನು ಹೊತ್ತಿಸಿ, ಮೂರು ನಾಲ್ಕು ಸಾರೆ ಎಳೆದನು. ಅವನ ಬಾಯಿಂದ ಹೊರಟ ಹೊಗೆಯು ಆ ಸಣ್ಣ ಕೋಣೆಯನ್ನೆಲ್ಲ ವ್ಯಾಪಿಸಿಬಿಟ್ಟಿತು.

ಸುಮಾರು ೩-೪ ತಾಸು ರಾತ್ರಿಯಾಗಿದೆ. ಆ ಹಳ್ಳಿಯಲ್ಲಿ ನಾಲ್ಕೂಕಡೆಗೆ ಶಾಂತತಾ ಸಾಮ್ರಾಜ್ಯವು ಪಸರಿಸಿದೆ. ಪಂತನು ಆತ್ಮಗತ ವಿಚಾರದಿಂದ ಎಚ್ಚತ್ತು ಬಾಗಿಲ ಕಡೆಗೆ ನೋಡಿದನು. ಬಾಗಿಲವು ಅರ್ಧ ತೆರೆದಿದ್ದು, ಭುವನಮೋಹಿನಿಯಾದ ಒಬ್ಬ ರಮಣಿಯು ಬಾಗಿಲಲ್ಲಿ ನಿಂತಿದ್ದಳು. ಅವನ ದೃಷ್ಟಿಯು ಆ ಸುಂದರ ಮೂರ್ತಿಯಲ್ಲಿಯೇ ಏಕರೂಪತೆಯನ್ನು ಹೊಂದಿತು. ಪ್ರಯತ್ನಪಟ್ಟರೂ ದೃಷ್ಟಿಯು ಬೇರೆ ಕಡೆಗೆ ಬೆರೆಯಲೊಲ್ಲದು; ಆಗ ಅವನು ಹುಚ್ಚನಂತೆ ಗಟ್ಟಿಯಾಗಿ—ನೀನು ಯಾರು ಎಂದು ಕೇಳಿದನು.

ಆ ರಮಣಿಯು ಮುಗುಳನಗೆಯಿಂದ ಕೋಣೆಯೊಳಗೆ ಬಂದು—ನನ್ನ ಗುರುತು ಹತ್ತಲಿಲ್ಲವೇನು ಎಂದು ಕೇಳಿದಳು.

ಪಂತನು ಐದು ವರ್ಷಗಳ ಹಿಂದೆ ಕಮಲೆಯನ್ನು ನೋಡಿದ್ದನು. ಕಮಲೆಯ ಆಗಿನರೂಪಕ್ಕೂ ಈಗಿನ ರೂಪಕ್ಕೂ ಬಹಳ ಅಂತರವಾಗಿತ್ತು. ಬಾಲ್ಯಾವಸ್ಥೆಯು ಹೋಗಿ ತಾರುಣ್ಯವು ಪ್ರಾಪ್ತವಾಗಿತ್ತು. ಭೂದೇವಿಯು ವಸಂತಕಾಲದಲ್ಲಿ ಭುವನ ಮೋಹಿನಿಯ ರೂಪವನ್ನು ತಾಳಿದಂತೆ ಕಮಲೆಯ ತಾರುಣ್ಯವು ನೋಡುವವರಿಗೆ ಮೋಹವನ್ನುಂಟು ಮಾಡುತ್ತಿತ್ತು. ಅವಳ ವಿಶಾಲವಾದ ಕಣ್ಣುಗಳೂ, ಲಜ್ಜೆಯಿಂದ ಕೆಳಗೆ ಮಾಡಿದ ಮುಖವೂ, ಕೋಮಲವಾದ ಸ್ವರವೂ ರಾಜಹಂಸದಂತೆ ಚಂಚಲವಾದ ನಡಿಗೆಯೂ. ಧನುಷ್ಯಾಕಾರದ ಹುಬ್ಬುಗಳೂ, ಪಂತನನ್ನು ಮೋಹಗೊಳಿಸಿದವು. ಆ ಪಾಪಿಷ್ಠನು ಮನಸ್ಸಿನಲ್ಲಿ—ಅಹಹ!! ಎಂಥ ಸುಂದರ ರೂಪವು!!! ಕಮಲೆ ನೀನೆಷ್ಟು ಸುಂದರಿಯಿರುವಿಯಲ್ಲ? ಅಯ್ಯೋ ಆ ಸಮಯದಲ್ಲಿ ನೀನು ಇಷ್ಟು ಸುಂದರಳಾಗಿ ತೋರಿದ್ದರೆ ನಾನು ಈ ಅಧಃಪಾತದ ಮಾರ್ಗವನ್ನೇ ಹಿಡಿಯುತ್ತಿದ್ದಿಲ್ಲ; ನನ್ನ ಸರ್ವಸ್ವವೂ ನಾಶವಾಗುತ್ತಿದ್ದಿಲ್ಲ!! ಅಧಮನಾದ ನಾನು ಆ ವೇಳೆಯಲ್ಲಿ ನಿನ್ನ ರೂಪವನ್ನೇ ನೋಡಿರಲಿಕ್ಕಿಲ್ಲವೇನು?

ಇದೇ ಸಮಯದಲ್ಲಿ ದುರ್ಬುದ್ಧಿಯು ಅವನ ಕಿವಿಯಲ್ಲಿ—"ಹುಚ್ಚಾ ರೂಪಕ್ಕೆ ಮರುಳಾಗುವ ಸಮಯವು ಇದಲ್ಲ. ನಿನ್ನ ಹೆಸರಿನಿಂದ ಮೂರು-ನಾಲ್ಕು ಪ್ರಾಮಿಸರಿ ನೋಟಿನ ಡಿಕ್ರಿಗಳು ಆಗಿರುವದನ್ನು ಮರತೆಯೇನು? ಹಣವಿಲ್ಲದೆ ಇಲ್ಲಿಂದ ಹಾಗೇ ತಿರುಗಿ ಹೋಗಲಿಕ್ಕೆ ಮಾರ್ಗವಿಲ್ಲ. ಇಂಥ ವೇಳೆಯಲ್ಲಿ ಸುಂದರ ರೂಪದ ಭ್ರಾಂತಿಗೆ ಹೋಗಬೇಡ. ಸಾವುಕಾರರ ಬಾಧೆಯಿಂದ ಮುಕ್ತನಾಗಿ ಜೇಲಿಗೆ ಹೋಗುವದನ್ನು ತಪ್ಪಿಸಿಕೊಳ್ಳಬೇಕಾದರೆ ಹಣವು ಒರುವ ಹಂಚಿಕೆ ಮಾಡು" ಎಂದು ಹೇಳಿತು. ಆಗ ಪಂತನು ಈ ಪ್ರಕಾರ ಮನಸ್ಸು ಚಂಚಲವಾದರೆ ಬಂದ ಕಾರ್ಯವೇ ಆಗಲಿಕ್ಕಿಲ್ಲವೆಂದು ಭಾವಿಸಿ ಹೆಂಡತಿಯನ್ನು ಕುರಿತು—ಕಲ್ಲಿನ ಗೊಂಬೆಯಂತೆ ಅಲ್ಲಿ ಯಾಕೆ ನಿಂತುಕೊಂಡಿ" ಬಾ ಹತ್ತರ ಕೂಡ್ರು ನಿನ್ನ ಸಂಗಡ ಕೆಲವು ಮಾತು ಆಡತಕ್ಕವಿವೆ.

ಬಹು ದಿವಸಕ್ಕೆ ಭೆಟ್ಟಿಯಾದ ಪತಿಯ ಈ ಪ್ರೇಮಮಯ ಭಾಷಣವನ್ನು ಕೇಳಿ ಅವಳ ಮನಸ್ಸು ಅಧೀರವಾಯಿತು. ಅವಳು ಗಂಡನ ಮೋರೆಯ ಕಡೆಗೆ ನೋಡಿದಳು. ಮುಖದ ಭಾವನೆಯು ಪರಿವರ್ತನೆಯಾಗಿತ್ತು. ಅವಳು ಗಂಡನ ಹತ್ತರ ಕುಳಿತು ನಗೆಮುಖದಿಂದ—ಇಂದು ನಿಮಗೆ ತ್ರಾಸವಾಗಿರಬಹುದು ಬಹಳ ಹಾದೀ ನಡೆದಿರುವಿರಿ. ಪಾದಸೇವೆಯನ್ನು ಮಾಡುತ್ತೇನೆ ಎಂದಳು.

ಮಂಗವು ಮಾಣಿಕದ ಬೆಲೆಯನ್ನು ತಿಳಿಯಬಹುದೆ? ನಮ್ಮ ಪಂತರಿಗೆ ಪತ್ನಿಯ ಈ ಪ್ರೇಮಮಯ ಆದರದ ಬೆಲೆಯು ತಿಳಿಯಲಿಲ್ಲ. ಆಗ ಅವನು ಹೆಂಡತಿಗೆ—"ನಿನ್ನ ಜಂಬವೂ, ಉಪಚಾರದ ಮಾತುಗಳೂ ಈಗ ಬೇಡ. ನಾನು ನಿನಗೆ ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ನೀನು ನಿಜವಾದ ಉತ್ತರವನ್ನು ಕೊಡುವಿಯಷ್ಟೇ? ಎಂದು ಕೇಳಿದನು. ಪತಿಯ ಈ ಅಪಮಾನಕಾರಕವಾದ ಮಾತುಗಳಿಂದ ಕಮಲೆಯ ಮನಸ್ಸಿಗೆ ವ್ಯಥೆಯಾಯಿತು. ಅವಳು ಗಂಡನ ಕಡೆಗೆ ನೋಡುತ್ತ—"ನೀವು ನನ್ನ ಇಷ್ಟದೇವತೆ, ಮತ್ತು ನನ್ನ ಸರ್ವಸ್ವವು; ಅಂದ ಬಳಿಕ ನಿಮ್ಮ ಮುಂದೆ ಸುಳ್ಳು ಯಾಕೆ ಹೇಳಲಿ" ಎಂದಳು.

ಪಂತನು ಮನಸ್ಸಿನಲ್ಲಿ ಏನೋ ಚಿಂತಿಸಿ ಆನಂತರ ಹೆಂಡತಿಯನ್ನು ಕುರಿತು—"ನಿನ್ನ ಮಾತು ಕೇಳಿ ನನಗೆ ಬಹು ಸಂತೋಷವಾಯಿತು. ನಿನಗೆ ನಾನು ಒಂದೇ ಪ್ರಶ್ನೆಯನ್ನು ಕೇಳುವೆನು ಅದೇನಂದರೆ ನಿಮ್ಮ ತಂದೆಯು ಸಾಯುವಾಗ ಎಷ್ಟು ದುಡ್ಡು ಕೂಡಿಸಿಟ್ಟಿದ್ದನು?

ಗಂಡನ ಮನಸ್ಸಿನ ಭಾವವನ್ನು ತಿಳಿದು ಅವಳು—"ನಮ್ಮ ತಂದೆಯು ಸಾಯುವಾಗ ೧ ಪೈ ಸಹ ರೊಕ್ಕ ಇಟ್ಟಿದ್ದಿಲ್ಲ. ನಾಲ್ಕು ಸಾವಿರ ರೂಪಾಯಿ

ಗಳ ಸಾಲವಾತ್ರ ಮಾಡಿದ್ದನು, ಆ ಸಾಲದ ಸಲುವಾಗಿ ಎಲ್ಲ ಜಮೀನುಗಳು ಸಾವುಕಾರರ ಪಾಲಾಗಿರುವವು, ನಾವಿರುವ ಇದೊಂದು ಮನೆಯು ಮಾತ್ರ ಉಳಿದದೆ'' ಎಂದು ಹೇಳಿದಳು.

ಪಂತನು ಹುಬ್ಬು ಗಂಟಿಕ್ಕಿ ಹೆಂಡತಿಯ ಕಡೆಗೆ ನೋಡುತ್ತ—''ಇರ ಬಹುದು, ನನ್ನ ಮುಂದೆ ಸಹ ಸುಳ್ಳು ಮಾತಾಡುತ್ತೀಯಾ? ನಾನು ಒಬ್ಬ ದೊಡ್ಡ ಮನುಷ್ಯನ ಬಾಯಿಂದ ನಿಮ್ಮ ತಂದೆಯು ಎರಡು ಸಾವಿರ ರೂಪಾಯಿ ಕೂಡಿಸಿದ್ದನೆ''ಂದು ಕೇಳಿರುವೆನು.

ಇದನ್ನು ಕೇಳಿ ಕಮಲೆಗೂ ಸಿಟ್ಟು ಬಂದಿತು. ಆವಳು ಸ್ವಲ್ಪ ಗಟ್ಟಿಯಾಗಿ— ''ಪತಿಯ ಮುಂದೆ ಸುಳ್ಳು ಹೇಳಬಾರದೆಂದು ಶಾಸ್ತ್ರವಿರುವದು. ನಾನಂತೂ ನಿಜ ಸಂಗತಿಯನ್ನು ಹೇಳಿರುವೆನು. ನೀವು ಬೇಕಾದರೆ ನಂಬಬಹುದು, ನಂಬದೆ ಇರ ಬಹುದು. ಈ ಸಂಗತಿಯನ್ನು ಯಾರ ಬಾಯಿಂದ ಕೇಳಿರುವಿರಿ; ಅವರ ಹೆಸರನ್ನು ಹೇಳಲಿಕ್ಕೆ ಅಡ್ಡಿ ಇರದಿದ್ದರೆ ಹೇಳಬಹುದು'' ಎಂದು ಪತಿಯನ್ನು ಕೇಳಿದಳು.

ಪಂತನು—ಹೊಸರಾಮಪುರದ ದೇಸಾಯಿಯರ ಗುಮಾಸ್ತನಾದ ರುದ್ರ ಪ್ಪನು ನನಗೆ ಈ ಸಂಗತಿಯನ್ನು ತಿಳಿಸಿದನೆಂದು ಹೇಳಿದನು.

ಕಮಲೆ—ಇದೇನು, ಸರ್ವನಾಶ! ಯಾವನು ನಮ್ಮ ತಂದೆಯ ಚಿರಶತ್ರು ವೋ, ಯಾವನು ತಂದೆಯ ದೇಶತ್ಯಾಗಕ್ಕೆ ಕಾರಣನೋ ಅಂಥವನ ಮಾತಿನಲ್ಲಿ ವಿಶ್ವಾಸವನ್ನು ಇಟ್ಟಿರುವಿರಲ್ಲ?

ಪಂತ—ಅವನ ಮಾತಿನ ಮೇಲೆಯಾಗಲಿ, ನಿನ್ನ ಮಾತಿನ ಮೇಲೆ ಯಾಗಲಿ ವಿಶ್ವಾಸವಿಡುವದು, ಬಿಡುವದು ನನ್ನ ಕೆಲಸ. ಆ ಬಗ್ಗೆ ನಿನ್ನ ಮತಬೇಡ. ನನಗೆ ಬೆಳಗಾಗುವದರೊಳಗೇ ಎರಡು ನೂರು ರೂಪಾಯಿಗಳನ್ನು ತಂದುಕೊಡ ಲಿಕ್ಕೇ ಬೇಕು, ರೂಪಾಯಿಗಳು ಸಿಗದಿದ್ದರೆ ನಾನು ಸಾವುಕಾರರ ಉಪದ್ರವಕ್ಕೆ ಸಿಕ್ಕು ತುರಂಗಕ್ಕೆ ಹೋಗಬೇಕಾಗುವದು.

ಗಂಡನ ಮಾತು ಕೇಳಿ ಕಮಲೆಗೆ ನಡಗು ಹುಟ್ಟಿತು. ತಮ್ಮ ಸದ್ಯಸ್ಥಿತಿ ಯು ಯಾವ ಪ್ರಕಾರವಿರುವದೆಂಬದನ್ನು ಹೇಳಿದರೆ ಗಂಡನಿಗೆ ವಿಶ್ವಾಸ ಹುಟ್ಟ ಬಹುದೇ ಎಂದು ಚಿಂತಿಸಿ ಗಂಡನನ್ನು ಕುರಿತು—ನೀವು ಯಾರ ಬಾಯಿಂದ ನಮ್ಮ ಹತ್ತರ ಹಣವಿರುವದೆಂದು ಕೇಳಿರುವಿರೋ? ಅದು ಸುಳ್ಳು. ಸದ್ಯಕ್ಕೆ ನಮ್ಮ ದಿನದ ಹೊಟ್ಟೆ ತುಂಬುವದು ಸಹ ಕಠಿಣವದೆ. ಎರಡು ನೂರು ಏಕೆ? ಮನೆಯಲ್ಲಿ ಹತ್ತು ರೂಪಾಯಿ ಸಹ ಇಲ್ಲ.

ಪಂತನು ಮೋರೆ ಸೊಟ್ಟಮಾಡಿ—ಇಷ್ಟು ಹೀನಾವಸ್ಥೆಯಲ್ಲಿ ಇರುವದಕ್ಕಿಂತ ಸಾಯುವದೇ ಲೇಸು ಎಂದನು.

ಗಂಡನ ಮಾತು ಕೇಳಿ, ಕಮಲೆಯ ತುಟಿಗಳು ನಡುಗಹತ್ತಿದವು. ಕಣ್ಣುಗಳಲ್ಲಿ ನೀರು ಬಂದವು, ಅಪಮಾನದಿಂದಲೂ, ಅಭಿಮಾನದಿಂದಲೂ, ಮುಖವು ಕೆಂಪಾಯಿತು. ಸಿಟ್ಟನ್ನು ತಡೆಯಲಿಕ್ಕೆ ಆಗಲಿಲ್ಲ, ಅವಳು—ಸಾಯುವದು ವಿಹಿತವಲ್ಲವೆ? ಅಯ್ಯೋ!! ನಿಮಗೆ ನಮ್ಮ ಕಷ್ಟಸ್ಥಿತಿಯು ಗೊತ್ತಿದ್ದರೆ ಎಂದೂ ಹೀಗೆ ಮಾತಾಡುತ್ತಿದ್ದಿಲ್ಲ!! ನಮ್ಮ ಕಷ್ಟವು ದೇವರಿಗೇ ಗೊತ್ತು!!!

ಪಾಷಾಣ ಹೃದಯದ ಪಂತನು ಹೆಂಡತಿಯು ಬಾಡಿದ ಮುಖವನ್ನೂ, ನಡುಗುವ ಹ್ರಯವನ್ನೂ, ದೈನ್ಯಾವಸ್ಥೆಯನ್ನೂ, ನೋಡಿ ಸಹ ಅವಳ ಮಾತಿನ ಮೇಲೆ ವಿಶ್ವಾಸವಿಡಲಿಲ್ಲ. ಮನುಷ್ಯನ ಹೃದಯದಲ್ಲಿ ಸ್ವಲ್ಪಾದರೂ ದಯವಿದ್ದರಲ್ಲವೇ ಎರಡನೇಯವರ ಮನೋವೇದನೆಯು ತಿಳಿಯುವದು?

ಪಂತನು ಹಾಸಿಗೆಯ ಮೇಲೆ ಕುಳಿತವನು ಎದ್ದು ನಿಂತು ಕಮಲೆಯಹತ್ತರ ಬಂದು—"ನಿನ್ನ ಕೈಯಲ್ಲಿ ಇರುವ ಈ ಬಂಗಾರದ ಬಳೆಯನ್ನು ಕೊಡುವೆಯಾ? ಸುಖದಿಂದ ತಿಂದುಂಡು ಪ್ಯೆಕ್ಯೆಯಿಂದ ದುಂಡಗಾಗಿರುತ್ತೀ ವಸ್ತ್ರಗಳನ್ನು ಹಾಕಿಕೊಂಡು ಮೆರೆಯುತ್ತೀ? ಹೀಗಿದ್ದು, ಅಳಲಿಕ್ಕೆ ನಿನಗೇನು ಧಾಡಿಯಾಗಿದೆ?

ಕಮಲೆಗೆ ಗಂಡನ ಮಾತು ಸಹನವಾಗಲಿಲ್ಲ. ಅವಳು ಕಷ್ಟವನ್ನು ನುಂಗಿಕೊಂಡು ಧೈರ್ಯದಿಂದ—ಹಿಂದಕ್ಕೊಮ್ಮೆ ನೀವು ಎಲ್ಲ ಆಭರಣಗಳನ್ನು ತೆಗೆದುಕೊಂಡು ನನ್ನನ್ನು ತಿರುಗಿ ಕಳುಹಿಸಿದಿರಿ ಅದರಿಂದ ನನಗೇನೂ ದುಃಖವಿಲ್ಲ. ಪತಿಗಿಂತ ಈ ಆಭರಣಗಳು ನನಗೇನು ಹೆಚ್ಚಿನವಲ್ಲ. ನನ್ನ ಕೈಯೊಳಗಿನ ಈ ಬಳೆಗಳು ಹಿತ್ತಾಳಿಯವಾಗದೆ ಬಂಗಾರದವಾಗಿದ್ದರೆ ನಿಮಗೆ ಉಪಯೋಗ ಬೀಳಲೆಂದು ಈಗೀಂದೀಗ ತೆಗೆದು ಕೊಡುತ್ತಿದ್ದೆನು. ಅಯ್ಯೋ! ದೈವವೇ!!! ನನ್ನ ಕಷ್ಟವೂ ಮರ್ಮವೇದನೆಯೂ ಇಷ್ಟಾದರೂ ನಿಮಗೆ ತಿಳಿಯಲಿಲ್ಲವೆ?

ದೇವರು ಪಂತನನ್ನು ದುರ್ಗುಣದ ಮೂರ್ತಿಯನ್ನಾಗಿ ಹುಟ್ಟಿಸಿದ್ದನು. ತಂಬಾಕ-ಗಾಂಜಿಗಳು ಅವನ ಪ್ರೀತಿಯ ವಸ್ತುಗಳು, ಇತ್ತಿತ್ತ ಹಣದ ಕೊರತೆಯ ಸಲುವಾಗಿ ಅವನು ಸುಂದರಿಯಾದ ಮದಿರಾದೇವಿಯ ಪೂಜೆಯನ್ನು ಮಾತ್ರ ಕಡಿಮೆ ಮಾಡಿದ್ದನು. ಇದರಿಂದ ಅವನು ಭ್ರಮಿಷ್ಠನಾಗಿದ್ದನು. ಆ ಪಾಪಾಂಧನು ಹೆಂಡತಿಯ ಕೈಯೊಳಗಿನ ಬಳೆಗಳನ್ನು ಪರೀಕ್ಷಿಸಿ ಅವು ಬಂಗಾರದವಲ್ಲವೆಂದು ಖಾತ್ರಿ ಮಾಡಿಕೊಂಡು ನಿರಾಶೆಯಿಂದ ಹೆಂಡತಿಯನ್ನು ಕುರಿತು—"ನಾನು ನಿನಗೆ

ಬೇಕಾಗಿದ್ದರೆ ಹೇಗಾದರೂ ಮಾಡಿ ನೀನು ನಿಮ್ಮ ತಾಯಿಯ ಕಡೆಯಿಂದ ಒಂದು ನೂರು ರೂಪಾಯಿಗಳನ್ನಾದರೂ ತಂದು ಕೊಡಲಿಕ್ಕೆ ಬೇಕು.

ಕಮಲೆಗೆ ಮುಂದೆ ಏನು ಮಾಡಬೇಕೆಂಬದು ತಿಳಿಯದ ಹಾಗಾಯಿತು. ಅವಳು ಒಳಗೆ ಹೋದಳು. ಬಸವಂತನು ತಂದ ಹತ್ತು ರೂಪಾಯಿಗಳ ಪೈಕಿ ಐದು ರೂಪಾಯಿ ಉಳಿದಿದ್ದವು. ಅವನ್ನು ತಂದು ಗಂಡನ ಮುಂದೆ ಇಟ್ಟು ಕಣ್ಣೀರು ಸುರಿಸುತ್ತ —"ನಮ್ಮ ಮನೆಯಲ್ಲಿದ್ದ ಹಣವನ್ನೆಲ್ಲ ನಿಮ್ಮ ಮುಂದೆ ಇಟ್ಟಿರುವೆನು. ಇದರಿಂದ ನಾಳಿನ ದಿವಸವೇ ನಮ್ಮ ಹೊಟ್ಟೆಯ ಸಲುವಾಗಿ ಕಷ್ಟವಾಗಬಹುದು, ಅದಕ್ಕೇನೂ ಚಿಂತಿಸುವದಿಲ್ಲ. ನನ್ನ ಮಾತಿನ ಮೇಲೆ ವಿಶ್ವಾಸವಿಡಿರಿ. ಈ ನಿರ್ಭಾಗ್ಯಳ ಮೇಲೆ ತಮ್ಮ ಕೃಪಾದೃಷ್ಟಿಯು ಮಾತ್ರ ಇರಲಿ.. ನೀವೇ ನನಗೆ ದೇವರು. ನನಗೆ ತಮ್ಮ ಪಾದದ ಹತ್ತರ ಆಶ್ರಯ ಕೊಡಿರಿ. ಹೀಗೆ ಹೇಳಿ ಸಾಸ್ಟಾಂಗ ನಮಸ್ಕಾರ ಮಾಡಿ ಗಂಡನ ಪಾದಗಳನ್ನು ಹಿಡಿದುಕೊಂಡು ಬಿಕ್ಕಿಬಿಕ್ಕಿ ಅಳಹತ್ತಿದಳು. ಮನೋವೇದನೆಯಿಂದ ಹೊರಟ ಬಿಸಿಯಾದ ನಾಲ್ಕಾರು ಕಣ್ಣೀರ ಹನಿಗಳು ಆ ಪಾಪಿಷ್ಠನ ಪಾದದ ಮೇಲೆ ಉದರಿದವು. ಪಾಪಾಂಧನಾದ ಪಂತನು ಮನುಷ್ಯನಾಗಿದ್ದರಷ್ಟೇ? ತನ್ನ ಹೆಂಡತಿಯ ಕಣ್ಣೀರು ಅವಳ ಹೃದಯವೇದನೆಯಿಂದ ಹೊರಟ ರಕ್ತದ ಹನಿಗಳೆಂದು ತಿಳಿದುಕೊಳ್ಳುವದು. ಅವನ ವಿವೇಕವು ಎಲ್ಲಿಯೋ ಪಲಾಯನವನ್ನು ಹೇಳಿಸಿತ್ತು; ಅವನು ಸದ್ಯಕ್ಕೆ ಪಿಶಾಚಿಯ ಸೇವಕನಾಗಿದ್ದನು. ನರಕದ ಮಾರ್ಗದಲ್ಲಿ ಮುಂದಾಗಬೇಕೆಂದು ಪ್ರಯತ್ನಿಸುತ್ತಿದ್ದನು. ಮರ್ಮವೇದನೆಯಿಂದ ಕಾತರಳಾಗಿ ದುಃಖಿಸುವ ದೀನ ಪತ್ನಿಯನ್ನು ಅವನು ಕಾಲಿನಿಂದ ಝಾಡಿಸಿ ಒದ್ದು ತನ್ನ ಗಂಟನ್ನು ತೆಗೆದುಕೊಂಡು ಆ ರಾತ್ರಿಯಲ್ಲಿಯೇ ಮನೆಯಿಂದ ಹೊರಬಿದ್ದನು.

ಗಂಡನಿಗೆ ಹೋಗುವದಕ್ಕೆ ಪ್ರತಿಬಂಧ ಮಾಡಿದರೆ, ಗದ್ದಲವಾಗಿ ತಾಯಿಗೆ ಎಚ್ಚರವಾದೀತು. ಮತ್ತು ಗದ್ದಲದಿಂದ ಓಣಿಯೊಳಗಿನ ಜನರಿಗೂ ಈ ಸಂಗತಿಯು ಗೊತ್ತಾಗುವದು. ಎಂದು ಭಾವಿಸಿ ಕಮಲೆಯು ಗಂಡನಿಗೆ ಪ್ರತಿಬಂಧ ಮಾಡಲಿಲ್ಲ. ಬಹು ದಿವಸದ ತರುವಾಯ ಆದ ಪತಿಯ ಸಮಾಗಮದ ಪರಿಣಾಮವು ಕಡೆಗೆ ಈ ಪ್ರಕಾರವಾಗಿ ಆಯಿತು.

ಗಂಡನು ಹೋದ ಮೇಲೆ ಅವಳು ಮನಸ್ಸಿನಲ್ಲಿ ಮನುಷ್ಯನಿಗೆ ಸುಖ-ದುಃಖಗಳು ದೇವರಿಂದಲೇ ಬರುವವೆಂದು ಶಾಸ್ತ್ರಗಳು ಹೇಳುವವು. ಮತ್ತು ಸಂಕಟಬಂಧಕಾಲದಲ್ಲಿ ಅವುಗಳನ್ನುಂಟು ಮಾಡುವ ದೇವರನ್ನೇ ಮೊರೆ ಹೋಗಬೇಕೆಂದು

ಹಿರಿಯರು ಹೇಳುತ್ತಿರುವರು. ನನಗೆ ಅವರು ಒದೆಯಲಿ, ಬಡೆಯಲಿ, ಬೇಕಾದ್ದು ಮಾಡಲಿ; ಅವರೇ ದೇವರು; ಅಂದ ಮೇಲೆ ಗಂಡನ ವಿಷಯದಲ್ಲಿ ಮಾನಾಪಮಾನಗಳ ವಿಚಾರವೇಕೆ? ಗಂಡನು ಇಚ್ಛಿಸಿದ ವಸ್ತುವನ್ನು ಕೊಡದೆ ಇದ್ದದ್ದೇ ನನ್ನದು ತಪ್ಪು, ಪರಮೇಶ್ವರಾ, ದೀನದಯಾಳೋ!! ನನಗೆ ಅಖಂಡ ಸೌಭಾಗ್ಯವನ್ನು ಕೊಡು ಮತ್ತು ಮುಂದಿನ ಜನ್ಮದಲ್ಲಿ ಇವರನ್ನೇ ಪತಿಯನ್ನಾಗಿ ಮಾಡು. ಹೀಗೆ ಅನೇಕ ವಿಚಾರ ಮಾಡುತ್ತ ಅಂದಿನ ರಾತ್ರಿಯನ್ನು ಕಳೆದಳು.

ಕಮಲೆಯು ಪ್ರತಿದಿವಸ ನಸುಕಿನಲ್ಲಿ ಎದ್ದು ಮನೆಯ ಅಂಗಳ ನಡುಮನೆಗಳ ಕಸ ತೆಗೆದು ಹೊಸ್ತಿಲ ಸಾರಿಸಿ ರಂಗವಲ್ಲಿಯನ್ನು ಹಾಕುತ್ತಿದ್ದಳು. ಆದರೆ ಹಿಂದಿನ ದಿವಸ ಬಹಳ ರಾತ್ರಿಯ ವರೆಗೆ ಎಚ್ಚತ್ತದ್ದರಿಂದ ಇಂದು ಮುಂಜಾನೆ ಕಮಲೆಗೆ ಬೇಗ ಎಚ್ಚರವಾಗಲಿಲ್ಲ. ಎದ್ದು ನೋಡಿದಳು; ಸೂರ್ಯನಾರಾಯಣನ ಕಿರಣಗಳು ಕಿಡಿಕೆಯೊಳಗಿಂದ ಅವಳ ಹಾಸಿಗೆಯ ಮೇಲೆ ಬಿದ್ದಿದ್ದವು. ಕೂಡಲೆ ಅವಳು ಎದ್ದು; ಹಾಸಿಗೆಯನ್ನು ಸುತ್ತಿ ನಡುಮನೆಗೆ ಬಂದಳು. ಅಲ್ಲಿ ಅವಳ ತಾಯಿಯು ಜಪ ಮಾಡುತ್ತ ಕುಳಿತುಕೊಂಡಿದ್ದಳು. ಅವಳು ತಾಯಿಯನ್ನು ಕುರಿತು—ಅವ್ವಾ ನಾನು ಇಂದು ಏಳುವದರೊಳಗೆ ಎಷ್ಟು ಹೊತ್ತಾಗಿರುವದಲ್ಲ!

ಗಂಗಾ—ಹೊತ್ತಾದರೆ ಏನಾಯಿತು; ಇಂದಿನ ದಿವಸ ಕಸ-ಮುಸರಿಗಳನ್ನು ನಾನು ಮಾಡಿದ್ದೇನೆ. ನಿನ್ನ ಗಂಡನು ಇನ್ನೂ ಮಲಗಿರುವನೇನು?

ಕಮಲೆಗೆ ಏನು ಉತ್ತರ ಕೊಡಬೇಕೆಂಬದೇ ತಿಳಿಯಲಿಲ್ಲ. ಮತ್ತು ಅವಳು ಎಂದೂ ಸುಳ್ಳು ಮಾತಾಡುವಳಲ್ಲ; ಆದರೂ ಅವಳು ಮನಸ್ಸಿನಲ್ಲಿ ಏನೋ ವಿಚಾರಿಸಿ—ಎಲ್ಲಿಯೋ ಬಹಳ ಜರೂರಿಯ ಕೆಲಸವಿತ್ತಂತೆ, ಆದ್ದರಿಂದ ಅವರು ನಸುಕಿನಲ್ಲಿಯೇ ಎದ್ದು ಹೋದರು. ಎಂದು ಹೇಳಿದಳು.

ಆ ಮಾತು ಕೇಳಿ ಗಂಗಾಬಾಯಿಯ ಮನಸ್ಸಿಗೆ ಕೆಡಕೆನಿಸಿತು. ಆಗ ಅವಳು—ನನಗೆ ಸ್ವಲ್ಪ ಭೆಟ್ಟಿಯಾಗಿ ಹೋಗಿದ್ದರೆ ನೆಟ್ಟಗಾಗುತ್ತಿತ್ತು. ಆಗಲಿ ತಿರುಗಿ ಯಾವಾಗ ಬರುವರು.

ತಾಯಿಯ ಈ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂಬದು ತಿಳಿಯಲಿಲ್ಲ. ಆಗ ಅವಳು—ನನಗೆ ಉಳಿದ ಯಾವ ಸಂಗತಿಯನ್ನೂ ಹೇಳಲಿಲ್ಲವೆಂದಳು.

ಕಮಲೆಯು ಮುಖ ತೊಳಕೊಂಡು ನೀರಿಗೆ ಹೊರಟು ಹೋದಳು. ಮುದುಕಿಯು ಮಾತ್ರ ಹಾಗೇ ಜಪ ಮಾಡುತ್ತ ಕುಳಿತಳು. ಇಂದು ಜಪದ ಕಡೆಗೆ

ಅವಳ ಮನಸ್ಸೇ ಇದ್ದಿಲ್ಲ. ಯಂತ್ರದಂತೆ ಜಪಮಾಲೆಯ ಮಣಿಯನ್ನು ಮಾತ್ರ ಸರಿಸುತ್ತಿದ್ದಳು. ಅವಳು ಮನಸ್ಸಿನಲ್ಲಿ—ಇಷ್ಟು ದಿವಸಗಳ ಮೇಲೆ ಅಳಿಯನು ಬಂದನು, ಮತ್ತು ಬೆಳಗಾಗುವದರೊಳಗೇ ಹೊರಟು ಹೋಗಿರುವನು. ಮಗಳ ಮುಖದ ಮೇಲೆಯೂ ಕಾಂತಿ ಇಲ್ಲ. ಇದೇನು ವಿಚಿತ್ರ ಎಂದು ಚಿಂತಿಸತೊಡಗಿದಳು.

( ೪ )

...

ಪಂತನು ಮಧ್ಯರಾತ್ರಿಯ ಸುಮಾರಕ್ಕೆ ಹೆಂಡತಿಯನ್ನು ಒದ್ದು, ತನ್ನ ಗಂಟು ತಕ್ಕೊಂಡು ಆ ಊರಿಂದ ಹೊರಟನು. ಅವನು ಮನಸ್ಸಿನಲ್ಲಿಯೇ ಹೆಂಡತಿಯನ್ನುದ್ದೇಶಿಸಿ—ನನಗಿಂತ ಹಣವು ನಿನಗೆ ಹೆಚ್ಚಿನದಾಯಿತೆ? ನೀನು ಆ ಹಣವನ್ನು ಕಟ್ಟಿಕೊಂಡು ಸುಖದಿಂದಿರು! ಹೀಗೆ ವಿಚಾರ ಮಾಡುತ್ತ, ಕಾಲು ಒಯ್ದತ್ತ ನಡೆದನು. ತಾನು ಎಲ್ಲಿಗೆ ಹೊರಟಿರುವನೆಂಬದು ಸಹ ಅವನಿಗೆ ಗೊತ್ತಿದ್ದಿಲ್ಲ. ಅಲ್ಲಿಂದ ಅವನು ಹೊಸ-ರಾಮಪುರಕ್ಕೆ ಬಂದು, ಊರಮುಂದಿನ ಹಾಳು ಧರ್ಮಶಾಲೆಯಲ್ಲಿ ಮಲಗಿಕೊಂಡನು. ಸುಂದರಿಯಾದ ಹೆಂಡತಿಯ ಸೇವೆ, ಯತ್ನಪೂರ್ವಕ ಸಿದ್ಧಗೊಳಿಸಿದ ಹಾಸಿಗೆ, ಬಹಳ ದಿವಸಕ್ಕೆ ಒದಗಿದ ಪತ್ನಿಯ ಸಮಾಗಮ ಇವೆಲ್ಲವನ್ನೂ ಬಿಟ್ಟು ಹುಡಿಯೊಡೆದ ಧರ್ಮಶಾಲೆಯಲ್ಲಿ ಚಿಕ್ಕಾಡು-ಗುಂಗಾಡುಗಳನ್ನು ಕಡಿಸಿಕೊಳ್ಳುತ್ತ, ಅನಾಥ ಭಿಕ್ಷುಕರಂತೆ ಮಲಗುವದು ಅವನ ನಶೀಬದಲ್ಲಿದ್ದ ಮೇಲೆ ಮಾಡುವದೇನು? ಅಲ್ಲಿ ಅವನು ಬೆಳತನಕ ಹಾಗೇ ಹೊರಳಾಡಿದನು.

ಯಾರ ಮಾತು ಕೇಳಿ ಪಂತನು ಅತ್ತೆಯ ಮನೆಗೆ ಧನಕಾಂಕ್ಷಿಯಾಗಿ ಹೋಗಿದ್ದನೋ ಅವರಿಗೆ ಒಮ್ಮೆ ಭೆಟ್ಟಿಯಾಗಿ ನಡೆದ ಸಮಾಚಾರವನ್ನು ಹೇಳಬೇಕೆಂದು ವಿಚಾರಿಸಿ ಆ ಧರ್ಮಶಾಲೆಯಿಂದ ಎದ್ದು ರುದ್ರಪ್ಪನ ಮನೆಗೆ ಹೋದನು. ಇನ್ನು ರುದ್ರಪ್ಪನ ಪರಿಚಯವನ್ನು ಸ್ವಲ್ಪ ಮಾಡಿಕೊಳ್ಳುವಾ.

ರುದ್ರಪ್ಪನು ಮೊದಲು ಭುಜಂಗರಾಯರ ಹತ್ತರ ಕೆಲಸ ಮಾಡಿದ್ದನು. ಹಿಂದೆ ಹೇಳಿದಂತೆ ಇಲ್ಲಿಯ ಕೆಲಸ ಕಳಕೊಂಡು ಗೋವಿಂದರಾಯರ ಹತ್ತರ ಕೆಲಸಕ್ಕೆ ಹೋದ ಮೇಲೆ ಇಲ್ಲಿಯ ಗುಟ್ಟಿನ ಎಲ್ಲ ಸಂಗತಿಯನ್ನೂ ಅವರಿಗೆ ತಿಳಿಸಿ

ದೇಸಾಯಿಯರ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಗೋವಿಂದರಾಯನಿಗೂ ಇಂಥ ಒಬ್ಬ ನೌಕರನು ಬೇಕಾಗಿದ್ದನು.

ರುದ್ರಪ್ಪನು ಬಳವಂತರಾಯರ ಮೇಲೆ ವಾರಂಟು ಹೊರಡಿಸಿ ಅವನು ದೇಶತ್ಯಾಗ ಮಾಡುವಂತೆ ಮಾಡಿದನಷ್ಟೇ; ಮುಂದೆ ಸ್ವಲ್ಪ ದಿವಸಗಳಲ್ಲಿ ಅವನು ಬಳವಂತರಾಯನ ಮರಣವಾರ್ತೆಯನ್ನೂ ಕೇಳಿದನು. ಇಷ್ಟಕ್ಕೆ ಅವನು ತೃಪ್ತನಾಗಲಿಲ್ಲ. ಅವನ ದುಃಖಿತ ಪರಿವಾರವನ್ನು ಇನ್ನೂ ಪೀಡಿಸಬೇಕೆಂದು ದುರಾಲೋಚನೆ ಮಾಡಿ ಅದಕ್ಕೆ ಯೋಗ್ಯ ವೇಳೆಯನ್ನು ಹುಡಕಹತ್ತಿದನು.

ಮನೋಹರಪಂತನ ಚರಿತ್ರೆಯು ರುದ್ರಪ್ಪನಿಗೆ ಗೊತ್ತಿತ್ತು. ಪಂತನು ಹೊಲಗಳನ್ನು ಒತ್ತೀಹಾಕಿ ಮನೆಯನ್ನು ಸಹ ಎರಡನೇಯವರಿಗೆ ಒರಕೊಟ್ಟಿದ್ದನು. ಈ ಎಲ್ಲ ಸಂಗತಿಗಳು ಗೊತ್ತಿದ್ದ ಕಾರಣ ಅವನು ಒಮ್ಮೆ ಗದಗಿಗೆ ತನ್ನ ಕೆಲಸಕ್ಕೆ ಹೋದಾಗ ಪಂತನ ಪತ್ತೆಯನ್ನು ಹಚ್ಚಿದನು. ಆಗ ಪಂತನು ರುದ್ರಪ್ಪನಿಗೆ ಸ್ವಲ್ಪ ಹಣ ಸಾಲ ಕೊಡೆಂದು ಕೇಳಿದನು. ಆಗ ರುದ್ರಪ್ಪನು—ನಿಮ್ಮ ಮನೆತನದವರ ಉಪಕಾರವು ನಮ್ಮ ಮೇಲೆ ಬಹಳ ಅದೆ, ಆದರೆ ಈ ಪ್ರಸಂಗದಲ್ಲಿ ನಿನಗೆ ಸಹಾಯ ಮಾಡುವ ಯೋಗ್ಯತೆಯು ನನಗೆ ಇಲ್ಲ. ನಾನು ಎಂದೂ ನಿಮ್ಮ ವಿಷಯದಲ್ಲಿ ಹಿಂದೆ ಮುಂದೆ ನೋಡುವವನಲ್ಲ; ಎಂದು ಕಳಕಳಿಯಿಂದ ಮಾತನಾಡಿ, ತನ್ನ ಮೇಲೆ ಅವನ ವಿಶ್ವಾಸ ಹುಟ್ಟಿಸಿಕೊಂಡನು. ಕೆಲವು ಹೊತ್ತು ವಿಚಾರಿಸಿ ಹಾಗಾದರೆ ನಾನು ಒಂದು ಮಾರ್ಗ ತೋರಿಸುವೆನು. ಆ ಪ್ರಕಾರ ಮಾಡಿದರೆ ನಿನಗೆ ಹಣ ಸಿಗುವದು ಎಂದನು.

ಪಂತ—ಅದೇನು ಉಪಾಯ.

ರುದ್ರಪ್ಪ—ನಿಮ್ಮ ಮಾವನು ಸಾಯುವಾಗ ಬಹಳ ಹಣ ಕೂಡಿಸಿ ನಿಮ್ಮ ಅತ್ತೆಯ ಕಡೆಗೆ ಕೊಟ್ಟು ಸತ್ತಿರುವನು. ಹೋಗು ಅವಳಿಗೆ ಒಬ್ಬಳೇ ಮಗಳು. ನೀನು ನಿನ್ನ ಹೆಂಡತಿಯ ಸಹಾಯದಿಂದ ಹಣ ಸಂಪಾದಿಸಬಹುದು; ಎಂದು ಹೇಳಿದನು. ಅವಿವೇಕಿಯಾದ ಪಂತನು ಅವನ ಮೋಹದ ಮಾತಿಗೆ ಮರುಳಾಗಿ ರುದ್ರಪ್ಪನನ್ನು ಹಿತಚಿಂತಕನಂತೆ ಭಾವಿಸಿದನು. ಮತ್ತು ಮರುದಿವಸವೇ ಹೆಂಡತಿಗೆ ಪತ್ರ ಬರೆದನು.

ಪಂತನು ಧರ್ಮಶಾಲೆಯಿಂದ ಎದ್ದು ರುದ್ರಪ್ಪನ ಮನೆಗೆ ಬಂದನು. ರುದ್ರಪ್ಪನು ತಂಬಿಗೆ ತೆಗೆದುಕೊಂಡು ಹೊಲದ ಕಡೆಗೆ ಹೋಗಬೇಕೆಂದು ಹೊರಟಿದ್ದನು, ಅವನು ಪಂತನನ್ನು ನೋಡಿದ ಕೂಡಲೆ ಮುಗುಳುನಗೆಯಿಂದ—ಇದೇನು

ಪಂತರೆ, ಇಂಥ ನಸುಕಿನಲ್ಲಿ ಇತ್ತ ದಾರಿ ತಪ್ಪಿ ಬಂದಿರಲ್ಲ? ಎಂದು ಕೈಯೊಳಗಿನ ತಂಬಿಗೆಯನ್ನು ಇಟ್ಟು ಅವನಿಗೆ ನಮಸ್ಕಾರ ಮಾಡಿ ಮಾವನ ಮನೆಗೆ ಹೋಗಿದ್ದಿರೇನು? ಎಂದು ಕೇಳಿದನು.

ಪಂತ—ನಿಮ್ಮ ತರ್ಕವು ನಿಜವು. ನಾನು ಈಗ ಅಲ್ಲಿಂದಲೇ ಬಂದಿರುವೆನು, ನಾನು ಹೋದ ಕೆಲಸವು ಮಾತ್ರ "ಶುದ್ಧ ಕೌಲೂರಿಗೆ ಹೋದಂತೆ" ಎಂದನು.

ರುದ್ರಪ್ಪ—(ವಿಸ್ಮಯದಿಂದ) "ಏನು? ಹೋದ ಕೆಲಸವಾಗಲಿಲ್ಲವೇನು? ನಿಮ್ಮ ಅತ್ತೆಯು ಬಹಳ ಜೀನಿ ಎಂದೂ, ಅವಳ ಕೈಯಿಂದ ಹಣ ದೊರಕಿಸುವದು ಬಹಳ ಕಠಿಣವೆಂದೂ ಕೇಳಿರುವೆನು" ಎಂದನು. ಆಗ ಪಂತನು ಅಲ್ಲಿ ವರ್ತಿಸಿದ ಎಲ್ಲ ಸಂಗತಿಯನ್ನೂ ರುದ್ರಪ್ಪನಿಗೆ ಹೇಳಿದನು. ಮತ್ತು ರುದ್ರಪ್ಪನನ್ನು ಕುರಿತು—ನೀವು ಹೇಳಿದ ಉಪಾಯವು ಸಾಧಿಸಲಿಲ್ಲ. ಮುಂದೆ ನನಗೇನು ಗತಿ ಎಂದನು.

ರುದ್ರಪ್ಪನು ಮುಗುಳು ನಗೆಯಿಂದ ನಗುತ್ತ—ನಿಮ್ಮ ಜೀವದ ಗೆಳೆಯನಾದ ಈ ರುದ್ರಪ್ಪನು ಇರುವ ವರೆಗೆ ಉಪಾಯಗಳಿಗೇನು ಕೊರತೆ? ವಿಚಾರ ಮಾಡೋಣ ಒಳಗೆ ನಡೆಯಿರಿ ಎಂದನು.

ರುದ್ರಪ್ಪನ ಮನೆಯವರೆಲ್ಲರೂ ಕುಕುನೂರಲ್ಲಿ ಇದ್ದರು. ಇಲ್ಲಿ ಅವನೊಬ್ಬನೇ ಇರುತ್ತಿದ್ದನು. ಮತ್ತು ಅವರ ಜಾತಿಯ ಒಬ್ಬ ಆಳುಮನುಷ್ಯನು ಇವನಿಗೆ ಅಡಿಗೆ ಮಾಡಿ ಹಾಕುತ್ತಿದ್ದನು. ರುದ್ರಪ್ಪನು ಒಳಗೆ ಹೋಗಿ "ಸ್ನಾನವನ್ನು ತೀರಿಸಿಕೊಂಡು ಪಂತನ ಹತ್ತರ ಬಂದು ಅವನನ್ನು ಕುರಿತು—"ಪಂತರೇ ಒಂದು ಪ್ರಯತ್ನವು ನಿಷ್ಫಲವಾದರೆ ಅಷ್ಟಕ್ಕೆ ಹಿಂಜರಿಯಬಾರದು. ಫಲ ಸಿಗಬೇಕಾದರೆ ಬಹಳ ಪ್ರಯತ್ನಪಡಬೇಕಾಗುವದು. ಇರಲಿ; ಈ ಬಗ್ಗೆ ಸಾವಕಾಶವಾಗಿ ವಿಚಾರ ಮಾಡೋಣ, ನಿಮಗೆ ಸ್ವಯಂ ಪಾಕದ ಅಭ್ಯಾಸವಿರುವದೇನು? ಎಲ್ಲ ಸಾಹಿತ್ಯವನ್ನು ಕಳಿಸಿಕೊಡುವೆನು. ಸ್ನಾನಮಾಡಿ ಅಡಿಗೆ ಮಾಡಿಕೊಂಡು ಊಟ ತೀರಿಸಿಕೊಳ್ಳಿರಿ. ಮತ್ತು ಒಂದು ಜಂಪು ನಿದ್ದೆ ಮಾಡಿರಿ. ನಾನು ನನ್ನ ಕಚೇರಿಯ ಕೆಲಸ ತೀರಿಸಿಕೊಂಡು ಬರುವೆನು. ಆ ಮೇಲೆ ವಿಚಾರ ಮಾಡೋಣ.

ರುದ್ರಪ್ಪನ ಮಾತಿನಿಂದ ಪಂತನಿಗೆ ಧೈರ್ಯಬಂತು. ಮುಳಗುವ ಮನುಷ್ಯನಿಗೆ ಆಸರಸಿಕ್ಕಂತೆ ಆಯಿತು. ದೇಸಾಯಿಯರ ದಿವಾಣನಾದ ರುದ್ರಪ್ಪನಿಗೆ ಅಸಾಧ್ಯವಾದ ಕೆಲಸವು ಯಾವದು ಎಂದು ಅವನು ಮನಸ್ಸಿನಲ್ಲಿ ಆಲೋಚಿಸತೊಡಗಿದನು. ಆದರೆ ಪಂತನಿಗೆ ರುದ್ರಪ್ಪನು ತನ್ನ ಮಾವನ ಶತ್ರುವೆಂದೂ, ಮಾವನ

ನಾಶಕ್ಕೆ ಇವನೇ ಕಾರಣನೆಂದು ಗೊತ್ತಿದ್ದಿಲ್ಲ. ತನ್ನ ತಂದೆಯ ಕಾಲದಲ್ಲಿ ರುದ್ರಪ್ಪನು ಬಹುದಿವಸ ಜಪ್ತಾನು ಮಾಡುತ್ತಿದ್ದನು. ಆ ಸಂಬಂಧದಿಂದ ನಮ್ಮ ಹಿತಕಾಂಕ್ಷಿಯಾಗಿರುವನೆಂದು ಭಾವಿಸಿಕೊಂಡನು.

ಪಂತನು ಸ್ನಾನಮಾಡಿ ಸ್ವತಃ ಅಡಿಗೆ ಮಾಡಿಕೊಂಡು ಊಟ ಮಾಡಿ ಸ್ವಸ್ಥ ಮಲಗಿಕೊಂಡನು. ಹಿಂದಿನ ರಾತ್ರಿ ನಿದ್ರೆಯಾಗದ ಕಾರಣ ಅವನಿಗೆ ಚನ್ನಾಗಿ ನಿದ್ದೆ ಹತ್ತಿತು. ಐದುತಾಸಿನ ಸುಮಾರಿಗೆ ಮಲಗಿದ ಪಂತನು ಹಗಲಿನ ನಾಲ್ಕನೇ ಪ್ರಹರದ ಅಂತಿಮಸಮಯಕ್ಕೆ ಎಚ್ಚತ್ತನು. ಎದ್ದು ಮುಖ ತೊಳಕೊಂಡು ತಂಬಾಕ ಸೇದುವದಕ್ಕೆ ತೊಡಗಿದನು. ಅಷ್ಟರಲ್ಲಿ ರುದ್ರಪ್ಪನು ಅಲ್ಲಿಗೆ ಬಂದನು. ಅವನು ಪಂತನನ್ನು ಕುರಿತು— ಕೈಯಿಂದ ಅಡಿಗೆಯನ್ನು ಸ್ವತಃ ಮಾಡಿಕೊಂಡ ಕಾರಣ ಬಹಳ ತ್ರಾಸವಾಗಿರಬಹುದು. ಇಂದು ರಾತ್ರಿಯೂ ಕೂಡ ಶ್ರಮಪಡಬೇಕಾಗುವದು ಎಂದನು.

ಪಂತ—ನನಗೆ ಹಸಿವೆ ಇಲ್ಲ ಸ್ವಲ್ಪ ನೀರು ಕುಡಿದು ಮಲಗುವೆನು.

ರುದ್ರಪ್ಪನು ಕೂಡಲೆ ಒಬ್ಬ ಸೇವಕನನ್ನು ಕರೆದು ಎರಡುತಾಸುರಾತ್ರಿಯ ಸುಮಾರಕ್ಕೆ ಹಾಲು ಸಕ್ಕರಿ ಪಂತರಿಗೆ ತಂದು ಕೊಡಲಿಕ್ಕೆ ಹೇಳಿದನು. ಆಗ ಪಂತನು ರುದ್ರಪ್ಪನನ್ನು ಕರೆದು—ಈಗ ನಿಮಗೆ ಅವಕಾಶವಿರುವದಷ್ಟೆ? ಹಣದ ಸಲುವಾಗಿ ಮುಂದಿನ ಯೋಜನೆ ಏನು ಎಂದು ಕೇಳಿದನು.

ರುದ್ರಪ್ಪನು ತಲೆಯ ಮೇಲೆ ಕೈಯಾಡಿಸುತ್ತ ಕೆಲವು ಹೊತ್ತು ಚಂತೆಯ ಕಡೆಗೆ ನೋಡಿ ವಿಚಾರ ಮಾಡಿದಂತೆ ತೋರಿಸಿ ಪಂತನನ್ನು ಕುರಿತು—ನಾನೂ ಅದೇ ವಿಚಾರದಲ್ಲಿರುವೆನು. ನನಗೆ ಒಂದು ಹಂಚಿಕೆ ಮಾತ್ರ ತೋರುವದು.

ಪಂತ—ಅದೇನು?

ರುದ್ರಪ್ಪ—ನಾನು ನಿಮಗೆ ಸಹಜವಾಗಿ ಎರಡು ನೂರು ರೂಪಾಯಿಗಳನ್ನು ಕೊಡುವೆನು. ಆದರೆ ಅವು ನನ್ನವಲ್ಲ. ನಮ್ಮ ಧನಿಯರವು. ಆದ್ದರಿಂದ ನೀನು ಮಾತ್ರ ಒಂದು ಕೆಲಸವನ್ನು ಮಾಡಬೇಕು.

ಅದಾವ ಕೆಲಸ?

ರುದ್ರಪ್ಪ, ನಾನು ದೇಸಾಯರಿಗೆ ತಿಳಿಸದೆ ನಿನಗೆ ರೂಪಾಯಿ ಕೊಡುವೆನು; ಆದರೆ ನೀನು ಒಂದು ಕಾಗದ ಮಾತ್ರ ಬರೆದು ಕೊಡಬೇಕು.

ಪಂತ ಮತ್ತೆ ಕಾಗದ! ನೋಟು ಬರೆದು ಕೊಡಬೇಕೆ? ನನ್ನ ಯಾವತ್ತೂ ಆಸ್ತಿಯು ಬರಕೊಟ್ಟ ಕಾಗದಗಳ ಡಿಕ್ರಿಗೆ ಆಹುತಿಯಾಗಿದ್ದು ಮತ್ತೆ ನೋಟು ಬರಕೊಡಬೇಕೆ?

ರುದ್ರಪ್ಪ—ನಿನಗೆ ಇಷ್ಟು ಬಾಧೆಯಿದ್ದರೆ ನಿನ್ನ ಅತ್ತೆಯ ಮನೆಯಿಂದ ಬರೀ ಕೈಬೀಸುತ್ತ ಬರುತ್ತಿದ್ದಿಲ್ಲ. ಇರಲಿ ನಾನು ನಿನಗೆ ಒಂದು ಮಾರ್ಗ ತೋರಿಸುತ್ತೇನೆ ಆ ಪ್ರಕಾರ ಕಾಗದ ಬರೆದು ಕೊಡು. ಅದರಿಂದ ನಿನಗೇನೂ ಅಹಿತವಾಗುವದಿಲ್ಲ.

ಪಂತ—ರುದ್ರಪ್ಪನ ಮೋರೆಯ ಕಡೆಗೆ ನೋಡುತ್ತ—ಅದೇನು ಹೇಳಿರಿ?

ರುದ್ರಪ್ಪನು ಗಂಭೀರಭಾವವನ್ನು ತಾಳಿ—ನಮ್ಮ ಧನಿಯು ಲಹರಿಯ ಸ್ವಭಾವದವನು. ನಿನಗೆ ಹಾಗೇ ಹಣ ಕೊಟ್ಟರೆ ನನ್ನ ಮೇಲೆ ಸಿಟ್ಟಾಗಬಹುದು. ಕಾರಣ ನೀನು ಒಂದು ಬತ್ತೀ ಪತ್ರ ಬರೆದು ಕೊಡು.

ಪಂತ—ನನ್ನ ಮನೆಯು ಸಹ ನನ್ನ ಅಧೀನದಲ್ಲಿಲ್ಲ; ಅಂದಬಳಿಕ ಯಾವ ಆಸ್ತಿಯ ಮೇಲೆ ನಿನಗೆ ಬತ್ತೀ ಬರಕೊಡಲಿ?

ರುದ್ರಪ್ಪ—ನನ್ನ ಮಾತನ್ನಾದರೂ ಪೂರ್ಣ ಕೇಳು. ನಿಮ್ಮ ಅತ್ತೆಯ ಹತ್ತರ ಸಾವಿರಾರು ರೂಪಾಯಿಗಳು ಇರುವದು ನಿಜವು; ಅವಳು ಹಾಗೇ ನಿನಗೆ ಸಹಾಯ ಮಾಡುವದಿಲ್ಲ. ನಿಮ್ಮ ಮಾವನಿಗಂತೂ ಗಂಡು ಮಕ್ಕಳಿಲ್ಲ. ನಿನ್ನ ಹೆಂಡತಿಯೊಬ್ಬಳೇ ಹೆಣ್ಣು ಮಗಳು; ಕಾಯಿದೆಪ್ರಕಾರ ನಿಮ್ಮ ಅತ್ತೆಯ ಪಶ್ಚಾತ್ ಎಲ್ಲ ಆಸ್ತಿಯೂ ನಿನ್ನ ಹೆಂಡತಿಗೇ ಆಗುವದು. ನಿಮ್ಮ ಅತ್ತೆಯು ಇನ್ನೇನೂ ಬಹಳ ದಿವಸ ಬದುಕಬೇಕಾಗಿಲ್ಲ. ಆದ್ದರಿಂದ ನೀನು ನಿಮ್ಮ ಅತ್ತೆಯ ಮನೆಯನ್ನು ಉತ್ತರಾಧಿಕಾರಿಯ ಹಕ್ಕಿನಿಂದ ನಮ್ಮ ಧನಿಯರಿಗೆ ಬತ್ತೀ ಬರೆದು ಕೊಡು. ಈ ಸುದ್ದಿ ತಿಳಿದ ಕೂಡಲೆ ನಿಮ್ಮ ಅತ್ತೆಯು ರೂಪಾಯಿ ಕೊಟ್ಟು ನಿನ್ನ ಸಾಲ ತೀರಿಸುವಳು. ನಿನ್ನ ಆಸ್ತಿಯೂ ನಿನಗೆ ಉಳಿಯುವದು. ನಿಮ್ಮ ಅತ್ತೆಯ ಕಡೆಯಿಂದ ಹಣ ದೊರಕಿಸುವದು ನಿನ್ನ ಕಡೆಯಿಂದ ಆಗಲಿಲ್ಲ. ನೋಡು ನನ್ನ ಯುಕ್ತಿಯು ಹೇಗದೆ?

ಇದನ್ನೆಲ್ಲ ಕೇಳಿ ಪಂತನಿಗೆ ಒಂದು ಪ್ರಕಾರದ ಭಯ ಹುಟ್ಟಿತು. ಅವನು ಸ್ವಲ್ಪ ಹೊತ್ತು ವಿಚಾರಿಸಿ—ರುದ್ರಪ್ಪಾ! ಇದು ಬಹಳ ಗೊಂದಲದ ಕೆಲಸ ಕಾಣುತ್ತದೆ. ಎರಡನೇಯವರ ಆಸ್ತಿ ನಾನು ಬರಕೊಟ್ಟು ಜೇಲಿಗೆ ಹೋಗಬೇಕಾದೀತು?

ರುದ್ರಪ್ಪ ನಗುತ್ತ—ತಮ್ಮಾ ನನಗಿಂತ ಹೆಚ್ಚಿನ ಕಾಯಿದೆ ನಿನಗೆ ಗೊತ್ತಿರುವದೇನು? ನೀನು ಆ ಕಾಗದ ನೋಂದಣಿ ಮಾಡಿಸಿ ಕೊಡಬೇಡ ತಿಳಿಯಿತೆ? ಆ ಕಾಗದವು ನಿಮ್ಮ ಅತ್ತೆಗೆ ಹೆದರಿಕೆ ಹಾಕುವದರ ಸಲುವಾಗಿ; ನಿಮ್ಮ ಅತ್ತೆಯಿಂದ

ಹಣ ಬಂದ ಬಳಿಕ ನಿನ್ನ ಕಾಗದ ನಿನಗೆ ತಿರುಗಿ ಕೊಡುವೆನು. ನಮ್ಮ ಯಜಮಾನನು ಕ್ಷುದ್ರನಲ್ಲ, ಆ ಮನೆಯಿಂದ ಅವರಿಗೇನೂ ಸ್ವರ್ಗ ಸಿಗುವದಿಲ್ಲ.

ಪಂತನಿಗೆ ಹಣದ ಅಡಚಣೆಯು ಬಹಳವಿತ್ತು. ಹಣ ಸಿಗದಿದ್ದರೆ ಡಿಕ್ರಿ ಮಾಡಿಸಿಕೊಂಡ ಸಾವುಕಾರರು ಇವನನ್ನು ಜೇಲಿಗೆ ಕಳಿಸಲಿಕ್ಕೆ ಸಹ ಹಿಂದು ಮುಂದೆ ನೋಡುತ್ತಿದ್ದಿಲ್ಲ. ಆದ್ದರಿಂದ ಅವನು ಹಲವು ತರದಿಂದ ವಿಚಾರ ಮಾಡಿದನು. ಹಣ ಸಿಗದಿದ್ದರೆ ಈಗ ಜೇಲಿಗೆ ಹೋಗ ಬೇಕಾಗುವದು. ಆಗಲಿ ಈಗಂತೂ ತಪ್ಪಿಸಿಕೊಳ್ಳುವೆನು. ಮುಂದಿನ ವಿಚಾರ ಮುಂದೆ; ರುದ್ರಪ್ಪನು ನನಗೆ ಕೆಡಕು ಮಾಡಲಿಕ್ಕಿಲ್ಲ. ನನ್ನ ಹಿತಚಿಂತಕನಿರುವನು, ಇಲ್ಲದಿದ್ದರೆ ನನ್ನ ಸಲುವಾಗಿ ಇಷ್ಟೇಕೆ ಶ್ರಮ ತೆಗೆದುಕೊಳ್ಳುತ್ತಿದ್ದನು? ಅತ್ತೆಯು ಸತ್ತರೆ ಆಸ್ತಿಯು ನನ್ನ ಹೆಂಡತಿಗೆ ಸಿಗುವದು ಕಾಯಿದೆ ಪ್ರಕಾರವೇ ಇರುವದು. ಏನೇ ಆಗಲಿ ಸದ್ಯಕ್ಕೆ ನನಗೆ ಹಣ ಸಿಕ್ಕರೆ ತೀರಿತು. ಮುಂದೆ ಪ್ರಸಂಗ ಬಂದಾಗ ವಿಚಾರ ಮಾಡೋಣ. ಎಂದು ನಿರ್ಧರಿಸಿ—ರುದ್ರಪ್ಪನವರೆ, ನಾನು ಮನೆ ಬರೆದು ಕೊಟ್ಟರೆ ನೀವು ಎಷ್ಟು ಹಣ ಕೊಡುವಿರಿ? ಎಂದು ಕೇಳಿದನು.

ರುದ್ರಪ್ಪ—ನಿಮಗೆಷ್ಟು ಬೇಕು?

ಪಂತ—ನನಗೆ ಮೂರು ನೂರು ರೂಪಾಯಿಗಳು ಬೇಕು.

ರುದ್ರಪ್ಪ—ನಾನು ನಾಲ್ಕು ನೂರು ಕೊಡುವೆನು ಕೆಲಸವನ್ನು ದೇವರ ಸ್ಮರಿಸಿ ಮಾಡಬೇಕಾಗುವದು. ನಾನು ನಮ್ಮ ಧನಿಯ ಹಿತದ ಕಡೆಗೆ ನೋಡಿದಂತೆ ನಿನ್ನ ಹಿತದ ಕಡೆಗೂ ನೋಡಬೇಕಾಗುವದು. ನೀನು ನನಗೆ ಹೊರಗಿನವನಲ್ಲ!

ಪಂತನಿಗೆ ಆನಂದವಾಯಿತು. ಸಾಲಗಾರರಿಗೆ ಎರಡು ನೂರು ರೂಪಾಯಿ ಕೊಟ್ಟರೂ ನನಗೆ ಎರಡು ನೂರು ರೂಪಾಯಿ ಉಳಿದವು. ಮತ್ತೆ ಗದಗಿನ ಹಾದೀ ಹಿಡಿದರಾಯಿತೆಂದು ನಿರ್ಧರಿಸಿಕೊಂಡನು. ಪ್ರಯತ್ನ ಮಾಡಿದರೆ ಇನ್ನೂ ಹೆಚ್ಚಿಗೆ ರೂಪಾಯಿ ಸಿಗಬಹುದೋ ಹೇಗೆ ನೋಡಬೇಕೆಂದು—ರುದ್ರಪ್ಪನವರೇ, ಕೆಲಸವು ಬಹಳ ಜಬಾಬದಾರಿಯದು ಇರುವದು, ಪ್ರಸಂಗದಲ್ಲಿ ನನ್ನ ಮೇಲೆ ಫೌಜದಾರಿಯು ಸಹ ಆಗಬಹುದು, ಕಾರಣ ಇನ್ನೂ ಐವತ್ತು ರೂಪಾಯಿಗಳನ್ನು ಕೊಡಿರಿ, ಎಂದು ಕೇಳಿದನು.

ರುದ್ರಪ್ಪನು ತಿರಸ್ಕಾರದಿಂದ—ಫೌಜದಾರಿ ಎಲ್ಲಿಯದು? ನಿನ್ನ ಮೇಲೆ ಫೌಜದಾರೀ ಮಾಡುವವರು ಯಾರು? ನಿಮ್ಮ ಅತ್ತೆ ಮಾಡಬೇಕಷ್ಟೆ? ದುಡ್ಡಿನ

ಸಲುವಾಗಿ ಅಳಿಯನನ್ನು ಜೇಲಿಗೆ ಕಳಿಸಿ, ಮಗಳ ಸರ್ವನಾಶವನ್ನು ಯಾಕೆ ಮಾಡಿಕೊಂಡಾಳು? ಎಂದನು.

ಅಂದಿನ ರಾತ್ರಿಯೇ ಸ್ಟಾಂಪು ತಂದು ಕಾಗದ ಬರೆಯಿಸಿದರು. ಅದಕ್ಕೆ ಸಹಿ ಮಾಡುವಾಗ ಪಂತನ ಕೈ ನಡುಗಹತ್ತಿತು. ಆಗ ಅವನ ಮನಸ್ಸು— "ಸದ್ಯಕ್ಕೆ ನಿನಗೆ ಹಣದ ಅವಶ್ಯಕತೆಯಿರುವದು. ಅಂದಬಳಿಕ ಹೀಗೆ ಅಧೈರ್ಯ ಮಾಡಿದರೆ, ಹಣ ಹೇಗೆ ದೊರಕೀತು?" ಎಂದು ಅಂದಿತು. ಜನರು ದುಡ್ಡಿನ ಸಲುವಾಗಿ ಎರಡನೆಯವರ ಹೊಟ್ಟೆಯಲ್ಲಿ ಚೂರಿಯನ್ನು ಚುಚ್ಚಲಿಕ್ಕೆ ಸಹ ಹಿಂದು ಮುಂದೆ ನೋಡುವದಿಲ್ಲ. ಅಂದಬಳಿಕ ಮನೋಹರಪಂತನು ಹಣದ ಸಲುವಾಗಿ ಕಾಗದದ ಹೊಟ್ಟೆಯಲ್ಲಿ ಟಾಕು ಚುಚ್ಚಿದ್ದು ಏನಾಶ್ಚರ್ಯ! ಮರುದಿವಸ ಪಂತನು ನಾಲ್ಕುನೂರಾ ಐವತ್ತು ರೂಪಾಯಿಗಳ ನೋಟನ್ನು ಪಾಕೀಟಿನಲ್ಲಿ ಹಾಕಿಕೊಂಡು ಊರ ಹಾದಿಯನ್ನು ಹಿಡಿದನು.

## [೫]

• • •

"ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ"

ಹಿಂದು ಜನರು ಜನ್ಮಭೂಮಿ ಮತ್ತು ಸ್ತ್ರೀ ಇವರ ಸಲುವಾಗಿ ತಮ್ಮ ಸರ್ವಸ್ವವನ್ನೂ ಆಹುತಿ ಕೊಡುವರು. ಜೀವವನ್ನು ಕೊಡಲಿಕ್ಕೆ ಸಹ ಹಿಂದು ಮುಂದೆ ನೋಡುವದಿಲ್ಲ. ನಮ್ಮ ದೇಶದ ಪತಿವ್ರತಾ ಸ್ತ್ರೀಯರು ಜಗತ್ತಿಗೆ ಆದರ್ಶಸ್ವರೂಪರಾಗಿರುವರು. ನಾವು ಯಾವ ಸ್ತ್ರೀಯರನ್ನು ಗುಲಾಮರಂತೆ ನಡೆಯಿಸಿಕೊಳ್ಳುವೆವೋ, ಅದೇ ಸ್ತ್ರೀಯರು ಸಾಯುವವರೆಗೆ ನಮ್ಮ ವಿಷಯದಲ್ಲಿ ಆದರವುಳ್ಳವರಾಗಿರುವರು. ತಮ್ಮ ಸುಖ-ದುಃಖಗಳ ಕಡೆಗೆ ಸಹ ಲಕ್ಷ ಕೊಡದೆ ಪುರುಷರ ಸುಖದ ಸಲುವಾಗಿಯೇ ಯತ್ನಿಸುವರು. ಯಜಮಾನತ್ವದಿಂದ ಪುರುಷರಿಗೆ ಯಾವ ಸುಖವು ದೊರೆಯುವದೋ, ಅದೇ ಸುಖವನ್ನು ಅವರು ದಾಸಿಯರಾಗಿ ಅನುಭವಿಸುವರು. ಅವರು ನಿಮ್ಮನ್ನೇ ಸರ್ವಸ್ವವೆಂದು ಭಾವಿಸುವರು. ಹೀಗಿದ್ದು, ನೀವು ಅವರ ಹೃದಯವನ್ನು ತಿಳಿಯಲಾರಿರಲ್ಲ! ಅಯ್ಯೋ! ನೀವು ಎಂಥ ಮೂರ್ಖರು! ಎಷ್ಟು ಸ್ವಾರ್ಥಿಗಳು!!

ಸಾಮಾನ್ಯವಾದ ಹಣದ ಸಲುವಾಗಿ ಪಂತನು ಹೆಂಡತಿಯನ್ನು ತಿರಸ್ಕರಿಸಿ, ಹೊರಟುಹೋದಮೇಲೆ ಕಮಲೆಯು ಮನಸ್ಸಿನಲ್ಲಿ—"ಅವರಿಗೆ ನಿಜವಾಗಿಯೂ ಹಣದ ಅವಶ್ಯಕತೆಯು ಇರಬಹುದು. ಇಲ್ಲದಿದ್ದರೆ ನಮ್ಮ ಹತ್ತಿರ ಬೇಡಲಿಕ್ಕೆ ಯಾಕೆ ಬಂದಾರು; ದೇವರೆ, ನಮಗೆ ಇಂಥ ಹೀನಸ್ಥಿತಿಯನ್ನು ಯಾಕೆ ಉಂಟುಮಾಡಿದಿ? ನನ್ನ ಜೀವವು ವ್ಯರ್ಥವು!" ಎಂದು ಹಲವು ಬಗೆಯಿಂದ ವಿಚಾರ ಮಾಡಹತ್ತಿದಳು.

ಪತಿಯು ಸಿಟ್ಟಿನಿಂದ ಹೋದ ಸಂಗತಿಯನ್ನು ಎರಡು ಮೂರು ದಿವಸ ಕಮಲೆಯು ಯಾರ ಮುಂದೆಯೂ ಹೇಳಲಿಲ್ಲ; ಆದರೆ ಈ ಸಂಗತಿಯನ್ನು ಬಹು ದಿವಸ ಗುಪ್ತವಾಗಿಡುವದು ಅವಳಿಂದಾಗಲಿಲ್ಲ. ಮನುಷ್ಯನಿಗೆ ಅತಿ ದುಃಖವಾದರೆ ಅದನ್ನು ತನ್ನವರ ಮುಂದೆ ಹೇಳಿದರೆ ಆ ದುಃಖದ ಭಾರವು ಕಡಿಮೆಯಾಗುವದು; ಆದರೆ ಕಮಲೆಗೆ ಗೆಳತಿಯರಿಲ್ಲ. ಆಪ್ತರಿಲ್ಲ. ಅವಳ ತಾಯಿಯೇ ಅವಳ ಆಧಾರ ಭೂತಳು. ಆದ್ದರಿಂದ ಯೋಗ್ಯವೇಳೆಯನ್ನು ನೋಡಿ, ಎಲ್ಲ ಸಂಗತಿಯನ್ನು ತಾ-ಯಿಗೆ ತಿಳಿಸಿದಳು. ಆಗ ಅವಳ ಮನಸ್ಸಿಗೆ ಸ್ವಲ್ಪ ಸಮಾಧಾನವಾಯಿತು. ಅವಳು ತನ್ನ ದುಃಖವನ್ನು ಯಾರಿಗೂ ತೋರಗೊಡುತ್ತಿದ್ದಿಲ್ಲ. ರಾತ್ರಿ ಹಾಸಿಗೆಯಮೇಲೆ ಮಲಗಿಕೊಂಡು ನಿಶ್ಶಬ್ದವಾಗಿ ರೋದನಮಾಡುತ್ತಿದ್ದಳು. ಮತ್ತು ದೇವರನ್ನು ಕುರಿತು ಮನಸ್ಸಿನಲ್ಲಿ—"ದಯಾಮಯ ಪ್ರಭೋ, ನನ್ನ ಈ ಅಂಧಕಾರಮಯ ಜೀವನದಲ್ಲಿ ಒಂದು ದಿವಸ ಹುಣ್ಣಿಮೆಯ ಪೂರ್ಣಚಂದ್ರನ ಉದಯವನ್ನುಂಟು ಮಾಡಿ ತಿರುಗಿ ಆ ಚಂದ್ರನನ್ನು ಅಮಾವಾಸ್ಯೆಯ ಗಾಢಾಂಧಕಾರದಲ್ಲಿ ಯಾಕೆ ವಿಲೀನಮಾಡಿದೆ? ದೇವಾ ಇನ್ನೊಮ್ಮೆ ಅಂಥ ಪ್ರಸಂಗವನ್ನು ತಂದುಕೊಡು. ನಾನು ಅವರ ಕಾಲು ಹಿಡಕೊಂಡು ಕ್ಷಮೆಯನ್ನಾದರೂ ಬೇಡಿಕೊಳ್ಳುವೆನು. ಅವರ ಕಡೆಗೆ ಏನೂ ತಪ್ಪಿಲ್ಲ. ನನ್ನ ದುರ್ದೈವವೇ ನನಗೆ ಈ ಪ್ರಕಾರ ಮಾಡಿತು.

ಮನುಷ್ಯನಿಗೆ ಬಹಳ ಸಂಕಟಗಳು ಒಂದೇ ವೇಳೆಯಲ್ಲಿ ಒಂದಪೊಂದರೆ, ಅವನು ದಿಕ್ಕು ತಪ್ಪಿದವನಾಗಿ ಭ್ರಮಿಷ್ಟನಂತೆ ಆಗುತ್ತಾನೆ; ಅವನಿಗೆ ಮುಂದಿನ ಮಾರ್ಗವೇ ತೋರುವದಿಲ್ಲ. ದುಷ್ಟ ಗ್ರಹಗಳು ಒಂದೇ ವೇಳೆಯಲ್ಲಿ ಕಮಲೆಯ ರಾಸಿಯ ಮೇಲೆ ಬಂದದ್ದರಿಂದ ಸಂಕಟಗಳು ಒಂದರಮೇಲೊಂದು ಬರಹತ್ತಿದ್ದವು. ಮೇಲೆ ಹೇಳಿದ ಸಂಗತಿಯು ವರ್ತಿಸಿದ ಒಂದು ತಿಂಗಳೊಳಗೆ ಅವಳ ಮೇಲೆ ಮತ್ತೊಂದು ಸಂಕಟವು ಬಂದೊದಗಿತು. ಅದೇನಂದರೆ ಅವಳ ತಾಯಿಯ ಅಜಾರಿಯು. ಅಕಾಲದಲ್ಲಿ ಪತಿಯು ಮರಣವಾದ್ದರಿಂದ ಗಂಗಾಬಾಯಿಗೆ ಬಹಳ ದುಃಖವಾಗಿತ್ತು. ಅದರಲ್ಲಿ ಗಂಡನ ಸಾಲಕ್ಕೆ ಯಾವತ್ತೂ ಆಸ್ತಿಯು ಹೋಗಿ,

ಮಧ್ಯಾಹ್ನದ ಊಟಕ್ಕೆ ಅಭಾವ ಒದಗಿತು. ಈ ಚಿಂತೆಯಿಂದ ಅವಳು ಮನಸ್ಸಿನಲ್ಲಿಯೇ ಕೊರಗಹತ್ತಿದಳು. ಮಗಳಿಗೆ ದುಃಖವಾದೀತೆಂದು ಹೊರಗೆ ತೋರಗೊಡುತ್ತಿದ್ದಿಲ್ಲ. ಈ ಪ್ರಕಾರ ಮನಸ್ಸಿನಲ್ಲಿ ಗುಪ್ತವಾಗಿದ್ದ ದುಃಖವು ಅಳಿಯನ ನೀಚ ವ್ಯವಹಾರದಿಂದ ಒಮ್ಮಿಂದೊಮ್ಮೆಲೆ ಹೊರಬಿತ್ತು. ಎಷ್ಟಾದರೂ ಅವಳ ದೇಹವು ರಕ್ತ ಮಾಂಸಗಳಿಂದ ಆದದ್ದು. ಅಂದಮೇಲೆ ಅದು ಎಷ್ಟು ದುಃಖವನ್ನು ಸಹಿಸೀತು? ತನ್ನ ತರುವಾಯ ಮಗಳ ಗತಿ ಏನು. ಎಂಬ ವಿಚಾರವು ಪ್ರಬಲವಾಗಿ, ಕಡೆಗೆ ಅದು ಕ್ಷಯರೋಗವನ್ನುಂಟು ಮಾಡಿತು. ಮೂರು ನಾಲ್ಕು ದಿವಸ ಸ್ವಲ್ಪ ಸ್ವಲ್ಪ ಜ್ವರ ಬಂದು ಕಡೆಗೆ ಹಾಸಿಗೆ ಬಿಟ್ಟು ಏಳದಹಾಗಾದಳು.

ಆ ಊರು ಹಳ್ಳಿಯಾದ್ದರಿಂದ ಅಲ್ಲಿ ಚಲೋ ಡಾಕ್ಟರರು ಇದ್ದಿಲ್ಲ; ಮಹಾದೇವಶಾಸ್ತ್ರೀ ಎಂಬ ವೈದ್ಯನು ಮಾತ್ರ ಇದ್ದನು. ಅವನು ಗಂಗಾಬಾಯಿಯ ಪ್ರಕೃತಿಯನ್ನು ನೋಡಿ ಶೀತಪಿತ್ಥ ಜ್ವರವೆಂದು ಅದಕ್ಕೆ ಔಷಧ ಕೊಡಹತ್ತಿದನು. ಇಪ್ಪತ್ತುನಾಲ್ಕು ತಾಸು ಜ್ವರ ಇರುತ್ತಿದ್ದವು; ದಿನ ದಿನಕ್ಕೆ ಗಂಗಾಬಾಯಿಯ ಶಕ್ತಿಯೂ ಕ್ಷೀಣವಾಗಹತ್ತಿತು. ಬಸವಂತನು ಮನೆಯ ಕೆಲಸಗಳನ್ನು ಬಿಟ್ಟು ಔಷಧೋಪಚಾರಕ್ಕೆ ತೊಡಗಿದನು.

ಎಂಟು-ಹತ್ತು ದಿವಸಗಳ ತರುವಾಯ ಒಂದು ದಿವಸ ಜ್ವರವು ಒಮ್ಮಿಂದೊಮ್ಮೆ ಆರಿದವು. ವೈದ್ಯನು ಅದನ್ನು ಶುಭಲಕ್ಷಣವೆಂದು ತಿಳಿದು ಕಮಲೆಯನ್ನು ಕುರಿತು—ಅಮ್ಮಾ, ಚಿಂತೆ ಮಾಡಬೇಡಿರಿ. ನಿಮ್ಮ ತಾಯಿಗೆ ಬೇಗ ಗುಣವಾಗುವದು. ಎಂದು ಹೇಳಿ ಹೊರಟು ಹೋದನು. ಬಸವಂತನು ಔಷಧತರಲಿಕ್ಕೆ ವೈದ್ಯನ ಸಂಗಡ ಅವರ ಮನೆಗೆ ಹೋದನು. ಕಮಲೆಯು ತಾಯಿಯ ಹತ್ತರ ಹಾಸಿಗೆಯ ಮೇಲೆ ಕುಳಿತುಕೊಂಡು ಮೈಮೇಲೆ ಕೈ ಆಡಿಸುತ್ತ—"ಕಮಲಾ ಇಂದು ನನಗೆ ಸ್ವಲ್ಪ ಗುಣವಾಗಿದೆ ಆದರೆ ಈಗ ಬಾಯಾರಿದೆ. ನನಗೆ ಸ್ವಲ್ಪ ಕುಡಿಯುವ ನೀರು ಕೊಡು" ಎಂದಳು.

ಕಮಲೆ—ಅವ್ವಾ ನೀರು ಯಾಕೆ ಕುಡಿಯುತ್ತೀ ನಿನ್ನ ಸಲುವಾಗಿ ಬಸವಂತನು ಕಲ್ಲುಸಕ್ಕರೆ ಉತ್ತತ್ತಿ, ದ್ರಾಕ್ಷಿ ಮೊದಲಾದವುಗಳನ್ನು ತಂದಿರುವನು. ನಿನಗೆ ಸ್ವಲ್ಪು ಕಲ್ಲುಸಕ್ಕರೆಯನ್ನು ತಂದುಕೊಡುವೆನು.

ಗಂಗಾಬಾಯಿ—ಬೇಡ, ನನಗೆ ಏನೂ ಬೇಡ; ಸ್ವಲ್ಪು ತಣ್ಣೀರು ಕೊಡು.

ಕಮಲೆ—ಅವ್ವಾ, ವೈದ್ಯರು ತಣ್ಣೀರು ಕೊಡಬಾರದೆಂದು ಹೇಳಿರುವರು. ಕಾಯಿಸಿದ ನೀರು ಅವೆ. ತಂದು ಕೊಡುವೆನು. ಎಂದು ಹೇಳಿ ಒಳಗೆ ಹೋಗಿ

ಕಲ್ಲುಸಕ್ಕರೆಯ ಹಳಕನ್ನೂ ಥಾಲಿಯಲ್ಲಿ ನೀರನ್ನೂ, ತಂದು ಕೊಟ್ಟಳು. ಅಷ್ಟರಲ್ಲಿ ಬಸವಂತನು ಹೊರಗೆ ಬಂದು ಅಕ್ಕಾ ಎಂದು ಒದರಿದನು.

ಬಸವಂತನ ಧ್ವನಿಯ ಗುರುತು ಹತ್ತಿದ ಕೂಡಲೆ ಕಮಲೆಯು ಎದ್ದು ಹೋಗಿ ಬಾಗಿಲ ತೆರೆದಳು.

ಬಸವಂತನು ಒಳಗೆ ಬಂದು—ಅಕ್ಕಾ ಅವ್ವನಿಗೆ ಈಗ ಹೇಗದೆ? ಎಂದನು.

ಕಮಲೆ—ತಿರುಗಿ ಜ್ವರ ಬಂದಿಲ್ಲ; ನೀರಡಿಕೆ ಮಾತ್ರ ಬಹಳವಾಗುತ್ತದಂತೆ. ಬಸವಂತಾ, ಅವ್ವನು ನಮ್ಮ ಕೈ ಬಿಟ್ಟು ಹೋದರೆ ನಮ್ಮ ಗತಿ ಏನು?

ಬಸವಂತ—ಛೀ ಹುಚ್ಚೀ! ಬರೆಜ್ವರಕ್ಕೆ ಮನುಷ್ಯರು ಸಾಯುವರೇನು? ಔಷಧಕ್ಕೆ ತಾನೇ ಗುಣವಾಗುವದು. ನಾನು ಔಷಧ ತೆಗೆದುಕೊಂಡು ಬರುವಾಗ ದೇಸಾಯಿಯರ ಭೆಟ್ಟಿಯಾಗಿತ್ತು; ನಾಳೆ ಅವರ ಗುರ್ತಿನ ಗದಗಿನ ಡಾಕ್ಟರರೊಬ್ಬರು ಬರತಕ್ಕವರಿರುವರಂತೆ; ಡಾಕ್ಟರನನ್ನು ಇಲ್ಲಿಗೆ ನಿಮ್ಮ ತಾಯಿಯ ಪ್ರಕೃತಿಯನ್ನು ನೋಡಲಿಕ್ಕೆ ಕಳಿಸುವೆವೆಂದು ದೇಸಾಯಿಯರು ಹೇಳಿರುವರು. ನಿಮ್ಮ ತಂದೆಯವರ ಮೇಲೆ ಭುಜಂಗರಾಯರ ಪ್ರೀತಿ ಬಹಳ ಇತ್ತು. ಅವ್ವನ ಅಜಾರಿಯ ಸುದ್ದಿಯನ್ನು ಕೇಳಿ ಅವರು ಬಹಳ ಚಡಪಡಿಸಿದರು. ಮತ್ತು ಪಥ್ಯದ ಸಲುವಾಗಿ ಸಾಬುಅಕ್ಕಿ ಉತ್ತಮೋತ್ತಮ ದ್ರಾಕ್ಷಿಗಳನ್ನು ಕಳಿಸಿ ಕೊಟ್ಟಿರುವರೆಂದು ಹೇಳಿ ತಂದ ಗಂಟನ್ನು ಕಮಲೆಯ ಕೈಯಲ್ಲಿ ಕೊಟ್ಟನು.

ಕಮಲೆಯು ಸ್ನೇಹಪೂರ್ಣದೃಷ್ಟಿಯಿಂದ ಬಸವಂತನ ಕಡೆಗೆ ನೋಡುತ್ತ—ಬಸವಂತಾ ನೀನು ಆಪ್ತನಲ್ಲ. ನಮ್ಮ ಜಾತಿಯವನು ಸಹ ಅಲ್ಲ. ಹೀಗಿದ್ದು ಆಪ್ತರಿಗಿಂತ ಹೆಚ್ಚು ಪ್ರೀತಿ ಮಾಡುತ್ತೀ. ಹಿಂದಿನ ಜನ್ಮದಲ್ಲಿ ನೀನು ನಮ್ಮ ಅಣ್ಣ ತಮ್ಮಂದಿರಾಗಿ ಹುಟ್ಟಿರಬಹುದು!! ನಿನ್ನ ಉಪಕಾರವನ್ನು ನಾವೆಂದಿಗೆ ತೀರಿಸಬೇಕು. ಎಂದು ಹೇಳಿ ಆ ಸಾಮಾನುಗಳನ್ನು ಒಳಗೆ ಒಯ್ದಳು.

ಕಮಲೆಯು ಒಳಗೆ ಹೋಗಿ ಸ್ವಲ್ಪ ಹಿಟ್ಟು ಕಲಿಸಿಕೊಂಡು ಬಂದು ಬಸವಂತನ ಮುಂದೆ ಇಟ್ಟು—ಇಂದು ನಿನಗೆ ಬಹಳ ಶ್ರಮವಾಗಿರಬಹುದು. ಇದನ್ನು ತಿಂದು ನೀರು ಕುಡಿ. ನಿನ್ನ ಈ ದರಿದ್ರ ಅಕ್ಕನಿಗೆ ಹಿಟ್ಟನ ಹೊರತು ಕೊಡಲಿಕ್ಕೆ ಮನೆಯಲ್ಲಿ ಏನೂ ಇಲ್ಲ.

ಬಸವಂತ—ಅಕ್ಕಾ ಹೀಗೇಕೆ ಅನ್ನುವಿ; ನೀನು ಪ್ರೀತಿಯಿಂದ ಕೊಟ್ಟ ಹಿಟ್ಟು ಅಮೃತಕ್ಕಿಂತ ಹೆಚ್ಚಿನದು. ಎಂದು ಹೇಳಿ, ತಿಂದು ನೀರು ಕುಡಿದು

ಹೊರಡಲಿಕ್ಕೆ ಸಿದ್ಧನಾದನು. ಮತ್ತು ಕಮಲೆಯನ್ನು ಕುರಿತು "ಅಕ್ಕಾ ಅವ್ವನಿಗೆ ಗುಣವಾಗುವ ವರೆಗೆ ನಮ್ಮ ಒಕ್ಕಲಗಿತ್ತಿಯಾದ ಚನ್ನವ್ವನನ್ನು ರಾತ್ರಿ ಮಲಗಲಿಕ್ಕೆ ಇಲ್ಲಿಗೆ ಕಳಿಸುವೆನು. ಅವಳು ಮುಂಜಾನೆ ಕಸ-ಮುಸುರಿ ಮೊದಲಾದ ಕೆಲಸಗಳನ್ನು ಮಾಡಿಕೊಟ್ಟು ನಮ್ಮ ಮನೆಗೆ ಒರಲಿ; ಅದರಿಂದ ನಮಗೂ ದಿನಾಲು ಅವ್ವನ ಅಜಾರಿಯ ಸಂಗತಿಯು ತಿಳಿಯುವದು.

ಬಸವಂತನು ಹೊರಟು ಹೋದನು. ಕಮಲೆಯು ಮನಸ್ಸಿನಲ್ಲಿ— "ನಿಸ್ವಾರ್ಥ ಪರೋಪಕಾರ ವ್ರತಧಾರಿಯಾದ ಬಸವಂತನು ಮನುಷ್ಯನೋ ದೇವರೋ ತಿಳಿಯದು. ಈ ಸ್ವಾರ್ಥಪೂರ್ಣ ಜಗತ್ತಿನಲ್ಲಿ ನಮ್ಮಂಥ ಸಹಾಯ ಹೀನರಾದ ದರಿದ್ರರಿಗೆ ಇಂಥ ಸ್ವಾರ್ಥರಹಿತರು ಸಿಗುವದು ದುರ್ಲಭವು. ದೇವರೇ ನಿನ್ನ ಲೀಲೆಯು ಅಗಾಧವಾದದ್ದು!!"

## [ ೬ ]

...

ಇಂದು ಪ್ರಾತಃಕಾಲದಲ್ಲಿ ಗಂಗಾಬಾಯಿಗೆ ಸ್ವಲ್ಪ ಗುಣವಾದಂತೆ ತೋರಿತು; ಅವಳು ಎದ್ದು ಮುಖ ತೊಳಕೊಂಡು ಜಪಮಾಡುತ್ತ ಕುಳಿತಳು. ಇದನ್ನೆಲ್ಲ ನೋಡಿ ಕಮಲೆಗೆ ಆನಂದವಾಯಿತು. ಅವಳು ಬಟ್ಟೆಗಳನ್ನು ತೆಗೆದುಕೊಂಡು ಊರ ಮುಂದಿನ ಹಳ್ಳಕ್ಕೆ ಒಗೆಯಲಿಕ್ಕೆ ಹೋದಳು.

ಗಂಗಾಬಾಯಿಯು ಮನೆಯ ಹತ್ತರ ರಮಾಬಾಯಿ ಎಂಬ ೨೪-೨೫ ವರ್ಷದ ವಿಧವೆಯೊಬ್ಬಳು ಇರುತ್ತಿದ್ದಳು. ಕಮಲೆಗೆ ಅವಳ ಪರಿಚಯವು ಬಹಳವಿತ್ತು. ಆಗ ಅವಳೂ ಹಳ್ಳಕ್ಕೆ ಒಗೆಯಲಿಕ್ಕೆ ಬಂದಳು. ಬಳಿಕ ರಮಾಬಾಯಿಯು ಕಮಲೆಯನ್ನು ಕುರಿತು—ಇಂದು ಶಿವರಾತ್ರಿಯಿದೆ. ನಾನು ಕಾಲ ಕಾಲೇಶ್ವರಕ್ಕೆ ಹೋಗಬೇಕೆಂದು ಮಾಡಿರುತ್ತೇನೆ ನೀನು ಬರುತ್ತೀ ಏನು?

ಕಮಲೆ—ನೀನು ಯಾವಾಗ ಹೋಗುವಿ.

ರಮಾ—ನಾನು ಐದಾರು ತಾಸಿಗೆಹೊರಡುವೆನು.

ಕಮಲೆ—ಕಾಲ ಕಾಲೇಶನ ದಯದಿಂದ ಇಂದು ಅವ್ವನಿಗೆ ಸ್ವಲ್ಪ ಗುಣವಾಗಿದೆ. ನಾನು ಅವ್ವನಿಗೆ ಗುಣವಾದರೆ ಎರಡು ಕಾಯಿ ಒಡೆಯಿಸುವೆನೆಂದು ಬೇಡಿಕೊಂಡಿರುವೆನು. ಕಾರಣ ನಾನೂ ಬರುತ್ತೇನೆ. ಹೋಗುವಾಗ ನನ್ನನ್ನು ಕರೆ.

ಕಾಲ ಕಾಲೇಶ್ವರನ ದೇವಸ್ಥಾನವು ರಾಮಪುರದಿಂದ ನಾಲ್ಕು ಮೈಲಿನ

ಮೇಲೆ ಒಂದು ಗುಡ್ಡದಲ್ಲಿ ಇತ್ತು. ಕೆಳಗಿನಿಂದ ದೇವಸ್ಥಾನದವರೆಗೆ ಸುಮಾರು ಒಂದುನೂರು ಪಾವಟಿಗೆಗಳಿದ್ದವು. ದೇವಸ್ಥಾನವು ಬಹು ಪುರಾತನದ್ದು. ಮತ್ತು ಜಾಗೃತಸ್ಥಾನವೆಂದು ಸುತ್ತಲೂ ಪ್ರಸಿದ್ಧಿಯಾಗಿತ್ತು. ಗುಡ್ಡದ ಮೇಲೆ ಒಂದು ಗವಿಯಿದ್ದು ಅಲ್ಲಿ ಒಂದು ಹೊಂಡವಿತ್ತು. ಆ ನೀರನ್ನು ದೇವರ ಪೂಜೆಗೆ ಉಪಯೋಗಿಸುತ್ತಿದ್ದರು. ಗವಿಯಲ್ಲಿ ಹಾಗೇ ಮುಂದಕ್ಕೆ ಹೋದರೆ ಅಲ್ಲಿ ಸಿದ್ಧಪುರುಷರು ತಪಸ್ಸಿಗೆ ಕುಳಿತಿರುವರೆಂದು ವೃದ್ಧರು ಹೇಳುತ್ತಿದರು; ಈಶ್ವರನ ಗುಡಿಯು ಹೊರಮಗ್ಗಲಿಗೆ ವೀರಭದ್ರ ಬ್ರಹ್ಮ ಮೊದಲಾದ ದೇವರಗುಡಿಗಳಿದ್ದವು. ಗುಡ್ಡದ ಕೆಳಗೆ ಸಣ್ಣವೆರಡು ಹೊಂಡಗಳಿದ್ದವು. ಜನರು ಆ ನೀರನ್ನು ಅಡಿಗೆಗೆ ಮತ್ತು ಕುಡಿಯುಲಿಕ್ಕೆ ಉಪಯೋಗಿಸುತ್ತಿದ್ದರು; ಪ್ರತಿಅಮಾವಾಸ್ಯೆಗೆ ಸುತ್ತಲಿನ ಹಳ್ಳಿಗಳ ಬಹಳ ಜನರು ಅಲ್ಲಿಗೆ ಹೋಗುತ್ತಿದ್ದರು.

ಪ್ರತಿವರ್ಷ ಚೈತ್ರಶುದ್ಧ ಪೌರ್ಣಿಮೆಗೆ ಜಾತ್ರೆಯಾಗುತ್ತಿತ್ತು. ಶಿವರಾತ್ರಿಗೂ ಬಹಳ ಜನರು ಕೂಡುತ್ತಿದ್ದರು. ಇಂದು ಶಿವರಾತ್ರಿಯಾದ್ದರಿಂದ ಗುಡಿಯಲ್ಲಿ ವಿಶೇಷ ಗದ್ದಲವಿತ್ತು. ರಮಾಬಾಯಿಯೂ, ಕಮಲೆಯೂ ಗದ್ದಲದೊಳಗಿಂದ ಪಾರಾಗಿ ಗರ್ಭಗುಡಿಯ ಬಾಗಿಲಿಗೆ ಹೋದರು. ಕಮಲೆಯು ಈಶ್ವರನಮುಂದೆ ಕೈ ಜೋಡಿಸಿಕೊಂಡು ನಿಂತು.—ಶಂಭೋ, ಶಂಕರಾ, ಕಾಲಕಾಲೇಶಾ, ನಾನು ಬಹಳ ದರಿದ್ರಾವಸ್ಥೆಯಲ್ಲಿರುವೆನು. ನನಗೆ ತಾಯಿಯು ಹೊರತು ಯಾರೂ ಗತಿಯಿಲ್ಲ. ನ್ಯಾಯದಿಂದಲೂ, ಧರ್ಮದಿಂದಲೂ ರಕ್ಷಣೆಮಾಡುವ ಅಧಿಕಾರವುಳ್ಳ ಪತಿಯಂತೂ ಕಾರಣವಿಲ್ಲದೆ ತ್ಯಾಗಮಾಡಿರುವನು. ಆದ್ದರಿಂದ ಪ್ರಭೋ, ಈ ದೀನಳ ಪ್ರಾರ್ಥನೆ ಏನಂದರೆ, ನನಗೆ ಆಧಾರಭೂತಳಾದ ತಾಯಿಯನ್ನು ಈ ರೋಗದಿಂದ ಮುಕ್ತ ಮಾಡು, ಎಂದು ಪ್ರಾರ್ಥಿಸಿ ಬಿಲ್ವವನ್ನೂ ಅಕ್ಷತೆಗಳನ್ನೂ ದೇವರಿಗೆ ಏರಿಸಿ, ಕಾಯಿ ಒಡಿಸಿಕೊಂಡಳು. ಅಲ್ಲಿ ಗದ್ದಲವು ಬಹಳವಾಗಹತ್ತಿತು. ಕಾರಣ ಇಬ್ಬರೂ ಗುಡಿಯಿಂದ ಹೊರಟರು. ಆಗ ರಮಾಬಾಯಿಯು— ಕಮಲಾ, ಈಗ ಸುಮಾರು ಏಳು ತಾಸು ಆಗಿರಬಹುದು. ಬಿಸಿಲಂತೂ ಬಹಳ ಪಡೆ, ಊರತನಕ ಉಸುಕಿನಲ್ಲಿ ನಡೆಯಬೇಕಾಗುವದು, ಉಸುಕು ಕಾದಿರುವದು. ಕಾರಣ ಹೊಂಡದ ಹತ್ತಿರ ಒಂದು ತಾಸು ಕುಳಿತು ಹೋಗೋಣ. ಮನೆಗೆ ಹೋಗಿ ನಾವು ಮಾಡುವದಾದರೂ ಏನದೆ?

ಕಮಲೆ—ನನಗೂ ಬಿಸಲಿನ ತಾಪ ಬಹಳವಾಗಿದೆ, ಸ್ವಲ್ಪ ನೀರು ಕುಡಿದು ಎಲ್ಲಿಯಾದರವ ನೆರಳಿಗೆ ಕೂಡೋಣ.

ಇಬ್ಬರೂ ಗುಡ್ಡದಿಂದ ಕೆಳಗೆ ಇಳಿದು ಬಂದರು. ಹೊಂಡದಲ್ಲಿ ಗದ್ದಲವು ಬಹಳವಿತ್ತು. ಜನರ ಗದ್ದಲದಿಂದ ನೀರು ರಾಡಿಯಾಗಿದ್ದವು. ಅಂತರಗಂಗೆಯು ನೀರನ್ನೆಲ್ಲ ವ್ಯಾಪಿಸಿತ್ತು. ಇದನ್ನೆಲ್ಲ ನೋಡಿ ಕಮಲೆಯು—ನೀರು ಕುಡಿಯಲಿಕ್ಕೆ ಚನ್ನಾಗಿ ಇಲ್ಲ. ಎಷ್ಟು ನೀರಡಿಕೆಯಾಗಿದ್ದರೂ ಚಿಂತೆಯಿಲ್ಲ, ಮುಂದೆ ಎಲ್ಲಿಯಾದರೂ ಚಲೋ ನೀರು ಇದ್ದರೆ ಕುಡಿಯೋಣ, ಇಲ್ಲದಿದ್ದರೆ ಹಾಗೇ ಊರಿಗೆ ಹೋಗೋಣ ಎಂದಳು. ಇಬ್ಬರೂ ಊರ ಹಾದೀ ಹಿಡಿದರು.

ಅವರು ಸುಮಾರು ಒಂದು ಮೈಲು ಹೋಗಿರಬಹುದು. ಅಷ್ಟರಲ್ಲಿ ಅವರ ಎದುರಿಗೆ ಹತ್ತರದಲ್ಲಿಯ ಹಳ್ಳಿಯ ಹೆಂಗಸರು ತಲೆಯಮೇಲೆ ನೀರುತುಂಬಿದಕೊಡಗಳನ್ನು ಹೊತ್ತುಕೊಂಡುಬರುತ್ತಿದ್ದರು. ಅವರನ್ನುನೋಡಿ ರಮಾಬಾಯಿಯು-- ಇಲ್ಲಿ ಸಮೀಪದಲ್ಲಿ ಕುಡಿಯುವ ನೀರಿನ ಬಾವಿ ಇರುವದೇನು? ಎಂದು ಕೇಳಿದಳು, ಆಗ ಅವರೊಳಗಿನವಳೊಬ್ಬಳು ಬಲಗಡೆಗೆ ಕಾಣುವ ತೋಟದ ಕಡೆಗೆ ಕೈಮಾಡಿ ಅಕೋ ಅಲ್ಲಿ ಕಾಣುವದು ದೇಸಾಯಿಯರ ತೋಟವು. ಉತ್ತಮವಾದ ಭಾವಿ ಇರುವದು. ನೀರು ಟೆಂಗಿನ ಹಾಲಿನಂತೆ ಇರುವವು. ದೇಸಾಯಿಯರು ಬಹಳ ಚಲೋಮಂದಿ, ಸಮೀಪದಲ್ಲಿ ದಾರಿಕಾರರಿಗೆ ವರ್ಷಪೂರಾ ಸಾಲುವಂಥ ಕುಡಿಯುವ ನೀರಿನ ಭಾವಿ ಇದ್ದಿಲ್ಲ, ಅದರಿಂದ ಅವರು ಜನರಿಗೆ ತ್ರಾಸವಾಗಬಾರದೆಂದು ಈ ಭಾವೀ ಕಟ್ಟಿಸಿರುವರು; ಆದರೆ ಅಲ್ಲಿ ಸ್ನಾನವನ್ನು ಮಾತ್ರ ಮಾಡಗೊಡುವದಿಲ್ಲ, ಅಂದು ಅವರಿಗೆ ಆ ದೇಸಾಯಿಯರ ತೋಟವನ್ನು ತೋರಿಸಿದಳು. ಆಗ ಕಮಲೆಯು ರಮಕ್ಕಾ ಲಗು ನಡೆ, ನಾವು ಆ ತೋಟಕ್ಕೆ ಹೋಗಿ ನೀರು ಕುಡಿದು ಕೆಲವು ಹೊತ್ತು ದಣುವಾರಿಸಿಕೊಂಡು ಹೋಗೋಣ.

ರಮಾಬಾಯಿ—ನಡೆ ಹೋಗೋಣ, ಬಿಸಲಿನ ತಾಪದಿಂದ ನನಗೂ ಬಾಯಾರಿ ನಾಲಿಗೆಯು ಸೆಳೆಯ ಹತ್ತಿದೆ. ಏನು ಉಗ್ರವಾದ ಬಿಸಿಲು ಇದು ಎಂದಳು.

ಅವರು ಹೊಲದೊಳಗಿನ ಕಾಲುದಾರೀ ಹಿಡಿದು ತೋಟದ ಕಡೆಗೆನಡೆದರು. ಒಂದೆರಡುಹೊಲಗಳನ್ನು ದಾಟಿದ ಕೂಡಲೆ ತೋಟವು ಬಂತು. ತೋಟದ ಮುಂ-ಭಾಗದಲ್ಲಿಯೇ ಭಾವಿ ಇತ್ತು. ಅದಕ್ಕೆ ಇಳಿಯಲಿಕ್ಕೆ ಬರುವಂತೆ ಮೂರು ಕಡೆಗೆ ಕಲ್ಲಿನ ಪಾವಟಿಗೆಗಳನ್ನು ಕಟ್ಟಿದ್ದರು. ಉತ್ತರಭಾಗಕ್ಕೆ ಯಾತ ಹೊಡೆಯಲಿಕ್ಕೆ ಬರುವಂತೆ ಮಾಡಿದ್ದರು. ಇವರು ಭಾವಿಯ ದಂಡೆಯಮೇಲೆ ನಿಂತಾಗ ೩-೪ಜನ ಹೆಂಗಸರು ಕೊಡಗಳನ್ನು ತುಂಬುತ್ತಿದ್ದರು.

ತೋಟವು ನೋಡಲಿಕ್ಕೆ ಬಹಳ ಮನೋಹರವಾಗಿತ್ತು. ಎಡಕ್ಕೆ ಬಾಳೆಯ ಬನವೂ ಬಲಕ್ಕೆ ಲಿಂಬೆ ಕಿತ್ತಳೆ ಪೇರಲ ಮೊದಲಾದ ಹಣ್ಣಿನ ಗಿಡಗಳೂ ಇದ್ದವು; ಭಾವಿಯ ಸುತ್ತಲೂ ಕಲಮೀಮಾವಿನ ಗಿಡಗಳನ್ನು ಹಚ್ಚಿದ್ದರು. ಮಾವಿನಗಿಡದ ಮಧ್ಯದಲ್ಲಿ ಅಲ್ಲಲ್ಲಿ ಮಲ್ಲಿಗೆ ಗುಲಾಬಿ, ಶೇವಂತಿಗೆ, ಬಕುಲ ಮೊದಲಾದ ಸುಗಂಧದ ಹೂವಿನ ಗಿಡಗಳೂ ಹಚ್ಚಲ್ಪಟ್ಟಿದ್ದವು; ಮಧ್ಯದಲ್ಲಿರುವ ಕಾರಂಜಿಯಿಂದ ನೀರು ಒಂದೇ ಸವನೆ ಪುಟಿಯುತ್ತಿತ್ತು. ಅದರಿಂದುಂಟಾದ ಇಂದ್ರಧನುಷ್ಯಗಳು ನೋಡುವವರಿಗೆ ಆನಂದವನ್ನುಂಟು ಮಾಡುತ್ತಿದ್ದವು. ಆ ತೋಟದ ಮಧ್ಯ ಭಾಗದಲ್ಲಿ ಎರಡು ಅಂತಸ್ತಿನ ಒಂದು ಬಂಗ್ಲೆಯು ಇತ್ತು. ಅಲ್ಲಿಂದ ಭಾವಿಯ ವರೆಗೆ ಉತ್ತಮವಾದ ಲೈನಮಾರ್ಗವ ಮಾಡಿ ಅದರ ಎರಡೂ ಮಗ್ಗಲಿಗೆ ಅಶೋಕ ವೃಕ್ಷಗಳನ್ನು ಸಾಲಾಗಿ ಹಚ್ಚಿದ್ದರು.

ರಮಾಬಾಯಿಯೂ ಕಮಲೆಯೂ ಭಾವಿಯಲ್ಲಿ ಇಳಿದು ಸ್ವಲ್ಪ ಖರ್ಜೂರ ತಿಂದು ನೀರುಕುಡಿದು, ಅಲ್ಲಿಂದ ವಿಶ್ರಾಂತಿಗೋಸ್ಕರ ದಂಡೆಯ ಮೇಲೆ ಮಾವಿನ ಮರದ ನೆರಳಿಗೆ ಬಂಗ್ಲೆಯ ಕಡೆಗೆ ಮುಖಮಾಡಿಕೊಂಡು ಕುಳಿತರು. ಅಂಥ ಮಧ್ಯಾಹ್ನದಲ್ಲಿಯೂ ಕೂಡ ಮಂದಮಾರುತನು ಅನೇಕ ಸುಗಂಧಪುಷ್ಪಗಳ ಸುಗಂಧವನ್ನು ಬೀರುತ್ತ ಬಳಲಿದವರತಾಪವನ್ನು ಕಡಿಮೆಮಾಡಲುಯತ್ನಿಸುತ್ತಿದ್ದನು. ಬಂಗ್ಲೆಯ ಎರಡನೇ ಅಂತಸ್ತಿನ ಕೋಣೆಯಲ್ಲಿ ಒಬ್ಬ ನವತರುಣನು ಕಿಡಿಕೆಯ ಮಗ್ಗಲಿಗೆ ನಿಂತು ಕಿಡಿಕೆಯೊಳಗಿಂದ ಕಮಲೆಯ ಕಡೆಗೆ ನೋಡುತ್ತಿದ್ದನು. ಕಿಡಿಕೆಯ ಪರದೆಯು ಮೇಲಕ್ಕೆ ಕಟ್ಟಲ್ಪಟ್ಟಿತ್ತು. ಆ ಯುವಕನು ಕಮಲೆಯ ಸೌಂದರ್ಯವನ್ನು ಏಕಾಗ್ರಚಿತ್ತದಿಂದ ನೋಡುತ್ತ ಮೈಮರೆತಿದ್ದನು. ಆ ಯುವಕನಹಿಂದೆ ಸುಮಾರು ೩೦-೩೨ ವಯಸ್ಸಿನ ಒಬ್ಬ ಪ್ರೌಢಸ್ತ್ರೀಯು ನಿಂತುಕೊಂಡು ಆ ಯುವಕನ ಸೌಂದರ್ಯಲೋಲುಪತೆಯನ್ನು ನೋಡಿ ಮುಗಳುನಗೆಯಿಂದ ನಗುತ್ತಿದ್ದಳು. ಕೆಲಹೊತ್ತಿನಮೇಲೆ ಆ ಯುವಕನು ಒಂದು ನಿಟ್ಟುಸಿರುಬಿಟ್ಟು—ಅಹಾ! ಎಂದನು.

ಆಗ ಆ ಪ್ರೌಢ ಸ್ತ್ರೀಯು—"ಹುಜೂರ, ಒಂದೇಸವನೆ ಏನು ನೋಡುತ್ತಿರುವಿರಿ" ಎಂದಳು.

ಹೀಗೆ ಅಕಸ್ಮಾತ್ತಾಗಿ ಕೇಳಿದ ಪರಿಚಿತ ಧ್ವನಿಯಿಂದ ಆ ಯುವಕನು ಆಶ್ಚರ್ಯಚಕಿತನಾಗಿ ಹಿಂದಕ್ಕೆ ತಿರುಗಿ ನಿಂತು—ನೀನು ಈ ವೇಳೆಯಲ್ಲಿ ಇಲ್ಲಿಗೆ ಯಾಕೆ ಬಂದೆ? ಏನು ಕೆಲಸವದೆ? ಎಂದನು,

ಸ್ತ್ರೀ—ನೀವು ರುದ್ರಪ್ಪನ ಮುಂದೆ ಇಂದು ಮಧ್ಯಾಹ್ನದಲ್ಲಿ ಭೆಟ್ಟಿಯಾಗ ಬೇಕೆಂದು ನನಗೆ ಹೇಳಿ ಕಳುಹಿಸಿದ್ದಿರಿ. ಆ ಪ್ರಕಾರ ಬಂದೆನು.

ಯುವಕನು ಉಸುರ್ಗರೆಯುತ್ತ—ಮೀನಾಕ್ಷೀ, ಆ ಸುಂದರ ಸ್ತ್ರೀಯರು ಯಾರು? ನಿನಗೆ ಗೊತ್ತು ಅದೆಯೇನು?

ಮೀನಾಕ್ಷಿ—ಇಲ್ಲ; ನನಗೆ ಗೊತ್ತಿಲ್ಲ. ಇವರು ಎರಡನೇ ಊರವರಿರ ಬಹುದು.

ಯುವಕನು ಮತ್ತೆ ಭಾವಿಯ ಕಡೆಗೆ ನೋಡಿದನು. ಆ ಇಬ್ಬರು ಸ್ತ್ರೀಯರೂ ಊರಿಗೆ ಹೊರಡಲಿಕ್ಕೆ ಸಿದ್ಧರಾಗಿ ಎದ್ದುನಿಂತಿದ್ದರು. ಅದನ್ನು ನೋಡಿದ ಕೂಡಲೆ ಅವನ ಮನಸ್ಸು ಚಂಚಲವಾಯಿತು. ಆಗ ಅವನು—ಮೀನಾಕ್ಷೀ, ನಾನು ನಿನ್ನನ್ನು ಯಾವ ಕೆಲಸದ ಸಲುವಾಗಿ ಕರೆಯಿಸಿದ್ದೆನೋ, ಆ ಕೆಲಸದಬಗ್ಗೆ ಹಿಂದಿನಿಂದ ವಿಚಾರ ಮಾಡೋಣ. ನೀನು ಈಗ ಇವರಿಗೆ ತಿಳಿಯದಂತೆ ಬೆನ್ನ ಹಿಂದೆ ಹೋಗಿ, ಇವರು ಯಾವ ಊರವರು, ಯಾರ ಮನೆಯವರು ಇದನ್ನೆಲ್ಲ ಗೊತ್ತುಹಚ್ಚಿಕೊಂಡು ಬಾ; ನಿನ್ನ ಶ್ರಮವನ್ನು ವ್ಯರ್ಥ ಹೋಗಗೊಡುವದಿಲ್ಲ, ಎಂದು ಹೇಳಿ, ಹತ್ತರಿದ್ದ ಕಪಾಟ ತೆಗೆದು ನಾಲ್ಕು ರೂಪಾಯಿಗಳನ್ನು ತೆಗೆದು ಮೀನಾಕ್ಷಿಯ ಕೈಯಲ್ಲಿ ಕೊಟ್ಟು—ಇಂದು ಸಂಜೆಗೆ ನನಗೆ ಸುದ್ದೀ ತರಲಿಕ್ಕೆ ಬೇಕು. ಇವರ ಹಿಂದೆ ಎರಡು-ಮೂರು ಹರದಾರಿ ನಡೆಯುವ ಪ್ರಸಂಗವು ಬಂದರೂ ಸಹ ನೀನು ಹಿಂದುಮುಂದೆ ನೋಡಬೇಡ.

ಮೀನಾಕ್ಷಿಯು ಆ ರೂಪಾಯಿಗಳನ್ನು ಸೆರಗಿನಲ್ಲಿ ಕಟ್ಟಿಕೊಂಡು ಅಟ್ಟದಿಂದ ಇಳಿದು ಕೆಳಗೆ ಬಂದಳು. ಅಷ್ಟರಲ್ಲಿ ರಮಾಬಾಯಿಯೂ, ಕಮಲೆಯೂ ತೋಟವನ್ನು ದಾಟಿ ಊರ ಹಾದೀ ಹಿಡಿದಿದ್ದರು. ಮೀನಾಕ್ಷಿಯು ಸ್ವಲ್ಪ ಅಂತರದ ಮೇಲೆ ಅವರ ಹಿಂದಿನಿಂದ ಹೊರಟಳು. ಅಂದಿನ ದಿವಸ ಕಾಲಕಾಲೇಶ್ವರಕ್ಕೆ ಹೋಗಿಬರುವ ಜನರು ಬಹಳ. ಆದ್ದರಿಂದ ಮೀನಾಕ್ಷಿಯಕಡೆಗೆ ಯಾರ ಲಕ್ಷ್ಯವೂ ಹೋಗಲಿಲ್ಲ. ಮೀನಾಕ್ಷಿಯು ಅವರ ಬೆನ್ನ ಹಿಂದೆ ಹಿಂದೆ ಕಮಲೆಯ ಮನೆಯ ತನಕ ಹೋಗಿ ಮನೆಯ ಎದುರಿಗೆ ದೂರದಲ್ಲಿರುವ ಒಂದು ಬೇವಿನಮರದ ಕೆಳಗೆ ಕುಳಿತಳು; ಆದರೆ ಅಂದಿನ ದಿವಸ ಕಮಲೆಯು ತನ್ನ ಮನೆಗೆ ನೆಟ್ಟಗೆ ಹೋಗದೆ, ರಮಾಬಾಯಿಯ ಮನೆಯಲ್ಲಿ ಹೋಗಿ, ಹಿತ್ತಲ ಬಾಗಿಲದಿಂದ ತನ್ನ ಮನೆಗೆ ಹೋದಳು. ಅದನ್ನು ನೋಡಿ ಮೀನಾಕ್ಷಿಯು—ಇದೇನು? ಇಬ್ಬರೂ ಒಂದೇ ಮನೆಯವರಾಗಿರಬಹುದೇನು? ನಾನು ಅವರ ಹಿಂದೆ ಅವರ ಮನೆಯವರೆಗೆ

ಯಾಕೆ ಹೋಗಲಿಲ್ಲ? ಆಗಲಿ; ನಾಳಿಗೆ ಬಂದು ಪ್ರಯತ್ನಮಾಡೋಣವೆಂದು ಸಮಾಧಾನ ಮಾಡಿಕೊಂಡಳು. ಆಮೇಲೆ ಊರಲ್ಲಿ ಹೋಗಿ ಪ್ರಯತ್ನಪಟ್ಟು, ಅವರ ಸಂಬಂಧದ ಕೆಲವು ಸಂಗತಿಗಳನ್ನು ತಿಳಕೊಂಡು ಊರಹಾದೀ ಹಿಡಿದಳು.

ಯಾವ ಯುವಕನು ತೋಟದಲ್ಲಿ ಕಮಲೆಯನ್ನು ನೋಡಿ ಮೋಹಿಸಿ, ಮೀನಾಕ್ಷಿಯನ್ನು ಅವಳ ಹಿಂದೆ ಕಳಿಸಿದ್ದನೋ, ಅವನೇ ಹೊಸರಾಮುಪುರದ ದೇಸಾಯಿಯಾದ ಗೋವಿಂದರಾಯನು. ಗೋವಿಂದರಾಯನ ಹೃದಯುಮಧ್ಯದಲ್ಲಿ ಕಮಲೆಯು ರೂಪವು ನಟ್ಟುಹೋಗಿತ್ತು. ಅವನು ಮನಸ್ಸಿನಲ್ಲಿಯೇ—ನಾನು ಈ ವರೆಗೆ ಅನೇಕ ಸ್ತ್ರೀಯರನ್ನು ನೋಡಿರುವೆನು; ಆದರೆ ಇವಳಷ್ಟು ಸುಂದರಿಯನ್ನು ನೋಡಲಿಲ್ಲ. ನಮ್ಮ ಈ ಪ್ರಾಂತದಲ್ಲಿ ಇಂಥ ಸುಂದರ ಸ್ತ್ರೀಯರು ಇರುವರೆಂಬ ಕಲ್ಪನೆಯು ಕೂಡ ನನಗಿದ್ದಿಲ್ಲ. ಮೀನಾಕ್ಷಿಯಂತೂ ಅವಳನ್ನು ಗೊತ್ತುಹಚ್ಚಿ ಕೊಂಡು ಬರಲಿಕ್ಕೆ ಹೋಗಿರುವಳು. ಏನು ಸುದ್ದೀ ತರುವಳೋ ನೋಡಬೇಕು, ಎಂದು ವಿಚಾರಮಾಡಹತ್ತಿದನು. ಅವನ ಮನಸ್ಸಿನ ಶಾಂತಿ, ವಿಚಾರ, ಧೈರ್ಯ ಮೊದಲಾದವುಗಳೆಲ್ಲ ಕಮಲೆಯ ಬೆನ್ನಹಿಂದೆ ಹೋಗಿಬಿಟ್ಟಿದ್ದವು. ಮನಸ್ಸಿನ ತಾಪ ದಿಂದ ಅವನು ಕೋಣೆಯೊಳಗೆ ಅತ್ತಿತ್ತ ಅಡ್ಡಾಡಹತ್ತಿದನು. ಆದರೂ ಅವನಿಗೆ ಸಮಾಧಾನವಾಗಲಿಲ್ಲ. ಕಡೆಗೆ ಅವನು ಮೇಜಿನಮೇಲೆ ಇದ್ದ ''ಮೇರಿಕಾರೆಲಿಯು'' ಎಂಬ ಒಂದು ಇಂಗ್ಲಿಷ ಕಾದಂಬರಿಯನ್ನು ಓದಲಿಕ್ಕೆ ಪ್ರಯತ್ನಮಾಡಿದನು; ಮನಸ್ಸು ಅತ್ತಕಡೆಗೂ ಹೋಗಲಿಲ್ಲ. ಆಗ ಅವನು ಆ ಪುಸ್ತಕವನ್ನು ಮುಚ್ಚಿ ಮೊದಲು ನಿಂತ ಕಿಡಕಿಯ ಹತ್ತರ ಒಂದು ನಿಂತನು. ಸಂಧ್ಯಾಕಾಲದ ತಂಗಾಳಿಯು ಅವನ ಉದಾಸೀನತೆಯನ್ನು ದೂರಮಾಡಲಿಕ್ಕೆ ಸಮರ್ಥವಾಗಲಿಲ್ಲ. ಧ್ಯಾನದಲ್ಲಿ ಕಮಲೆಯ ರೂಪವೇ ರೂಪ. ಆಗ ಅವನು ಮನಸ್ಸಿನಲ್ಲಿ—''ಅವಳು ಯಾರಾಗಿರಬಹುದು? ಎಲ್ಲಿಂದಲೋ ಒಂದು ನನ್ನ ಮನಸ್ಸನ್ನು ಹರಣಮಾಡಿ ಬಿಟ್ಟಳು. ಕಣ್ಣುಮುಚ್ಚಿದರೂ ಸಹ ನನ್ನ ಮುಂದೆ ಬಂದು ನಿಂತಂತೆ ಭಾಸ ವಾಗುತ್ತದೆ.'' ಎಂದು ತದೇಕ ಧ್ಯಾನದಲ್ಲಿ ಮಗ್ನನಾಗಿ ಅಲ್ಲಿಯೇ ನಿಂತುಬಿಟ್ಟನು. ಚಾಕರನು ಅಟ್ಟದಮೇಲೆ ಬಂದು ದೀಪಹಚ್ಚಿ ಹೋದದ್ದು ಸಹ ಅವನ ಲಕ್ಷದಲ್ಲಿ ಇದ್ದಿಲ್ಲ. ಕಡೆಗೆ ಅವನು ಮನಸ್ಸಿನ ಸಮಾಧಾನಕ್ಕೋಸ್ಕರ ಕಪಾಟ ತೆಗೆದು ಒಂದು ಬ್ರ್ಯಾಂಡಿಯ ಬಾಟ್ಲಿಯನ್ನು ತಕ್ಕೊಂಡನು; ಮತ್ತು ಅದನ್ನು ಒಂದು ಕಾಜಿನ ಪೇಲೆಯಲ್ಲಿ ಸುರುವಿ ಕುಡಿದು, ಅಲ್ಲಿರುವ ಆರಾಮ ಕುರ್ಚಿಯ ಮೇಲೆ ಬಿದ್ದುಕೊಂಡು ಸೀಝುರ ಸಿಗರೇಟ ಸೇದಹತ್ತಿದನು.

ಈ ವೇಳೆಯಲ್ಲಿ ರುದ್ರಪ್ಪನು ಅಲ್ಲಿಗೆ ಒಂದು ನೆಲಮುಟ್ಟಿ ಸಲಾಮುಮಾಡಿ--ಹುಜೂರ, ಅವೇಳೆಯಲ್ಲಿ ತಮಗೆ ತ್ರಾಸಮಾಡಲಿಕ್ಕೆ ಬಂದೆನು; ಕ್ಷಮಿಸಬೇಕು.

ಗೋವಿಂದ—ಮತ್ತೇನು ಪ್ರಕರಣ ತಂದಿರುವಿ?

ರುದ್ರಪ್ಪ—ಈ ಕಾಗದವನ್ನಿಷ್ಟು ನೋಡುವಿರೇನು?

ಗೋವಿಂದರಾಯನು ಕರ್ಕಶ ಸ್ವರದಿಂದ—ರುದ್ರಪ್ಪ, ನಿನ್ನಲ್ಲಿರುವ ದೋಷವು ಇದೊಂದೇನೋಡು. ವೇಳೆ ಅವೇಳೆ ಅನ್ನದೆ ತ್ರಾಸಕೊಡುತ್ತೀ; ಆಗಲಿ. ಈಗ ಹೋಗು. ಬೇರೆ ಕೆಲಸಮಾಡು. ಆ ಕಾಗದವನ್ನು ನಾನು ಮುಂಜಾನೆನೋಡುವೆನು.

ರುದ್ರಪ್ಪನು ತಮ್ಮ ಅಪ್ಪಣೆ, ಎಂದು ಅಲ್ಲಿಂದ ಹೊರಟುಹೋದನು. ಅವನು ಹೋದಮೇಲೆ ಗೋವಿಂದರಾಯನು ಮತ್ತೆ ಒಂದು ಗ್ಲಾಸು ಬ್ರ್ಯಾಂಡಿಯನ್ನು ಕುಡಿದು ಸಿಗ್ರೇಟಿನ ತುದಿಯ ಬೂದಿಯನ್ನು ಝಾಡಿಸಿ, ಮತ್ತೆ ಸೇದಹತ್ತಿದನು. ಅಷ್ಟರಲ್ಲಿ ಮೀನಾಕ್ಷಿಯು ಅಲ್ಲಿಗೆ ಬಂದು—"ಸರಕಾರ" ಎಂದಳು. ಮೀನಾಕ್ಷಿಯ ಪರಿಚಿತ ಧ್ವನಿಯನ್ನು ಕೇಳಿದಕೂಡಲೆ ಗೋವಿಂದರಾಯನು ಕುರ್ಚಿಯನ್ನು ಬಿಟ್ಟು ಎದ್ದುನಿಂತು ಉತ್ಕಂಠತೆಯಿಂದ—"ಮೀನಾಕ್ಷಿ, ಹೋದ ಕೆಲಸವು ಏನಾಯಿತು? ನೀನು ಹಾಗೇ ಬಂದಿರಲಿಕ್ಕಿಲ್ಲ," ಎಂದು ಕೇಳಿದನು.

ಮೀನಾಕ್ಷಿಯು ಒಂದು ಬಾಕಿನಮೇಲೆ ಕುಳಿತು—ಬಹುತೇಕ ಅರ್ಧ ಕೆಲಸವು ಆಗಿದೆ.

ಗೋವಿಂದ—ಅವಳು ಯಾವ ಊರವಳು?

ಮೀನಾಕ್ಷಿ—ರಾಮಪುರದವಳು.

ಗೋವಿಂದ—ಏನು, ರಾಮಪುರದವಳೇ? ಅಲ್ಲಿ ಯಾರ ಮನೆಯವಳು?

ಮೀನಾಕ್ಷಿ—ಎರಡು ಮನೆಗಳು ಒಂದಕ್ಕೊಂದು ಹತ್ತಿರುವವು. ಮೊದಲು ಅವಳು ತನ್ನ ಮನೆಗೆ ಹೋಗಲಿಲ್ಲ. ಕಡೆಗೆ ಶೋಧಮಾಡಲು ಅವಳು ಬಳವಂತರಾಯನ ಮಗಳೆಂದು ಗೊತ್ತಾಯಿತು.

ಗೋವಿಂದ—ಅವಳ ಹೆಸರೇನು?

ಮೀನಾಕ್ಷಿ—ಅವಳ ಹೆಸರು ಕಮಲೆ.

ಗೋವಿಂದ(ಮನಸ್ಸಿನಲ್ಲಿ)—ಅಹಾ! ಅವಳ ಹೆಸರು ಕೂಡ ಎಷ್ಟು ಮನೋಹರವಾಗಿರುವದಲ್ಲ! ಎಂದು ಭಾವಿಸುತ್ತ ಮೀನಾಕ್ಷಿಯನ್ನು ಕುರಿತು ಉತ್ತೇಜಿತ ಸ್ವರದಿಂದ—ಮೀನಾಕ್ಷಿ, ನಿನ್ನ ಜಾಣತನವು ಈ ಕೆಲಸದಲ್ಲಿ ಗೊತ್ತಾಗುತ್ತದೆ, ಎಂದು ಹೇಳಿ ಅವಳ ಮೋರೆಯ ಕಡೆಗೆ ನೋಡಹತ್ತಿದನು.

ಬಳವಂತರಾಯನ ಹೆಸರು ಕೇಳಿದ ಕೂಡಲೆ ಗೋವಿಂದರಾಯನು ನಿರಾಶನಾದನು. ಯಾಕಂದರೆ ಅವನು ಪ್ರತಿಸ್ಪರ್ಧಿಯಾದ ಭುಜಂಗರಾಯನ ಪ್ರೀತಿಗೆ ಪಾತ್ರನು. ವೈರಿಯ ಊರಿಗೆ ಹೋಗಿ ಅವನ ಪ್ರಜೆಗಳ ಮೇಲೆ ಜುಲುಮೆ ಮಾಡುವದು ಅವನಿಗೆ ಅಸಾಧ್ಯ ಕೆಲಸವಾಗಿತ್ತು.

ವಿಚಾರಮಗ್ನನಾದ ಗೋವಿಂದರಾಯನನ್ನು ನೋಡಿ ಮೀನಾಕ್ಷಿಯು—ಹುಜೂರ, ಏನೋ ಗಹನ ವಿಚಾರ ಮಾಡುತ್ತಿರುವಿರಲ್ಲ? ಎಂದಳು.

ಗೋವಿಂದ—ಕೆಲಸವು ಬಹಳ ಅಸಾಧ್ಯ ಕಾಣುತ್ತದೆ.

ಮೀನಾಕ್ಷಿ—ಈ ಮೀನಾಕ್ಷಿಯು ಜೀವಂತ ಇರುವವರೆಗೆ ನಿಮಗೆ ಅಸಾಧ್ಯವಾದ ಕೆಲಸವು ಯಾವದಿರುವದು? ಎಂದಳು.

ಗೋವಿಂದ—ಅವಳು ವೈರಿಯಾದ ಭುಜಂಗರಾಯನ ಊರಲ್ಲಿ ಇರುವಳು. ನಾನು ಅವನನ್ನು ಅನೇಕ ಜಗಳಗಳಲ್ಲಿ ಹಣ್ಣುಮಾಡಿದ್ದರೂ ಅವನೇನು ಸಾಮಾನ್ಯನಲ್ಲ. ಆದ್ದರಿಂದ ನನಗೆ ಸ್ವಲ್ಪ ಭಯ ಬರುತ್ತದೆ.

ಮೀನಾಕ್ಷಿ—ನೀವು ಆ ಭಯವನ್ನು ಕಟ್ಟಿಡಿರಿ. ನಾನು ಎರಡು-ಮೂರು ದಿವಸಗಳಲ್ಲಿ ವೇಷಬದಲಾಯಿಸಿಕೊಂಡು ರಾಮಪುರಕ್ಕೆ ಹೋಗಿ ಅವರ ಮನೆತನದ ಎಲ್ಲ ಮಾಹಿತಿ ತೆಗೆದುಕೊಂಡು ಬರುವೆನು. ಆಮೇಲೆ ಕೆಲಸವು ಸಾಧ್ಯವೋ ಅಸಾಧ್ಯವೋ ಹೇಳುತ್ತೇನೆ. ನನಗಂತೂ ಅಸಾಧ್ಯವಾದ ಕೆಲಸವು ಯಾವದೂ ಇಲ್ಲ.

ಮೀನಾಕ್ಷಿಯ ಮಾತುಕೇಳಿ ಗೋವಿಂದರಾಯನಿಗೆ ಸ್ವಲ್ಪ ಧೈರ್ಯಬಂತು. ಅವನು ಪೆಟ್ಟಿಗೆ ತೆಗೆದು ೫ ರೂಪಾಯಿಯ ನೋಟನ್ನು ಅವಳ ಕೈಯಲ್ಲಿ ಕೊಟ್ಟು "ಇನ್ನು ಎರಡು ದಿವಸಗಳಲ್ಲಿ ಯಾವತ್ತು ಸಂಗತಿಯನ್ನು ತಿಳಿದುಕೊಂಡು ಬರಬೇಕು", ಎಂದು ಹೇಳಿದನು. ಮೀನಾಕ್ಷಿಯು ನೋಟನ್ನು ತೆಗೆದುಕೊಂಡು ಮುಗುಳುನಗೆ ನಗುತ್ತ—ನಾನು ಈ ಕೆಲಸವನ್ನು ಮಾಡಿಕೊಂಡೇ ಬರುವೆನು, ಎಂದು ಹೇಳಿ ಮನೆಯ ಹಾದೀ ಹಿಡಿದಳು.

ಗೋವಿಂದರಾಯನು ಹೊಸರಾಮಪುರವನ್ನು ಬಿಟ್ಟು ೧ ಮೈಲಿನಮೇಲೆ ಇರುವ ತೋಟದಲ್ಲಿ ಬಂಗ್ಲೆಯನ್ನು ಕಟ್ಟಿಸಿ ಅಲ್ಲಿಯೇ ಹೆಚ್ಚಾಗಿ ಇರುತ್ತಿದ್ದನು. ಒಂದೊಂದು ದಿವಸ ಆ ಬಂಗ್ಲೆಯು ಅನೇಕಜನ ಮಿತ್ರರ ಆಗಮನದಿಂದಲೂ, ಗಾಯನ ನಾಚು ಮೊದಲಾದ ಉತ್ಸವಗಳಿಂದಲೂ ಕೋಲಾಹಲಪೂರ್ಣವಾಗುತ್ತಿತ್ತು.

ಗೋವಿಂದರಾಯನ ಪತ್ನಿಯ ಮರಣದ ತರುವಾಯ ಅವನ ತಾಯಿಯು ಮಗನಿಗೆ ಮತ್ತೆ ಲಗ್ನಮಾಡಿಕೊಳ್ಳಲಿಕ್ಕೆ ಹೇಳಿದಳು; ಮತ್ತು ನಾಲ್ಕೂಕಡೆಗೆ

ಕನ್ಯಾ ನೋಡಲಿಕ್ಕೆ ಜನರನ್ನು ಕಳಿಸಿದಳು. ಹತ್ತರದಲ್ಲಿದ್ದ ರಾಮಪುರದ ಬಳವಂತರಾಯನ ಮಗಳಾದ ಕಮಲೆಯು ಬಹಳ ಚಲುವೆಯೆಂಬ ಸುದ್ದಿಯನ್ನುಕೇಳಿ ತನ್ನ ಮಗನಿಗೆ ಕೊಡಲಿಕ್ಕೆ ಎರಡನೆಯವರಿಂದ ಬಳವಂತರಾಯನಿಗೆ ಹೇಳಿಸಿದಳು. ಆದರೆ ಇಷ್ಟರಲ್ಲಿಯೇ ಗೋವಿಂದರಾಯನ ಯಶೋದುಂದುಭಿಯು ಬಳವಂತರಾಯನ ಕಿವಿಯತನಕ ಮುಟ್ಟಿತ್ತು; ಮೇಲಾಗಿ ಗೋವಿಂದರಾಯನು ತನ್ನ ಯಜಮಾನನ ಶತ್ರುವು. ಇದರಿಂದ ಅವನು ಇದಕ್ಕೆ ಒಪ್ಪಲಿಲ್ಲ. ಕಮಲೆಯನ್ನು ತನಗೆ ಕೊಡುವದರಸಲುವಾಗಿ ಹಿಂದಕ್ಕೆ ಮಾತು ಹೊರಟ ಸುದ್ದಿಯು ಗೋವಿಂದರಾಯನ ನೆನಪಿನಲ್ಲಿತ್ತು. ಇದಾದ ಕೆಲವು ದಿನದಮೇಲೆ ಕಮಲೆಯನ್ನು ಕುಕನೂರಲ್ಲಿರುವ ಒಬ್ಬ ಶ್ರೀಮಂತನ ಮಗನಿಗೆ ಕೊಟ್ಟ ಸುದ್ದಿಯೂ ಸಹ ಗೋವಿಂದರಾಯನಿಗೆ ಗೊತ್ತು ಇತ್ತು. ಈ ಎಲ್ಲ ಸಂಗತಿಗಳು ಆವನಿಗೆ ನೆನಪಾದಕೂಡಲೆ—"ದೇವರೇ, ಆ ವೇಳೆಯಲ್ಲಿ ಕಮಲೆಯನ್ನು ನನ್ನವಳನ್ನಾಗಿ ಯಾಕೆ ಮಾಡಲಿಲ್ಲ?" ಎಂದು ಅಂದನು. ನಂತರ ದವಡೆಯನ್ನು ಕಚ್ಚಿ, ನಾನು ಹಿಡಿದ ಕೆಲಸವನ್ನು ಎಂದೂ ನಡುವೆಬಿಟ್ಟಿಲ್ಲ. ಆವಳು ಬಳವಂತರಾಯನ ಮಗಳೇಆಗಲಿ, ಯಾರೇಆಗಲಿ ನನ್ನ ಇಚ್ಛಿತ ಕಾರ್ಯಕ್ಕೆ ಅಡ್ಡಿಮಾಡಲು ಸಮರ್ಥರಾರು? ಎಂದು ಮತ್ತೆ ಸುಖಸ್ವಪ್ನದಲ್ಲಿ ಮಗ್ನನಾದನು.

## [ ೭ ]

ಕಮಲೆಯು ಕಾಲಕಾಲೇಶ್ವರಕ್ಕೆ ಹೋಗಿ ಬಂದ ದಿವಸ ರಾತ್ರಿ ಗಂಗಾಬಾಯಿಗೆ ಪರಮಾವಧಿ ಜ್ವರ ಬಂದವು. ಮೈಮೇಲೆ ಸ್ಮೃತಿ ಸಹ ಇದ್ದಿಲ್ಲ. ಇದನ್ನು ನೋಡಿ ಚನ್ನವ್ವನು ರಾತ್ರಿಯೇ ಬಸವಂತನನ್ನು ಕರಕೊಂಡು ಬಂದಳು. ಅವನು ಸಂಗಡ ವೈದ್ಯನನ್ನು ಕರಕೊಂಡೇ ಬಂದನು, ಉದಾರ ಹೃದಯನಾದ ಭುಜಂಗರಾಯನು ಬಳವಂತರಾಯನ ಅನಾಥ ಕುಟುಂಬದವರು ಬೇಕಾದಾಗ ಕರೆದರೂ ಹೋಗಿ ಔಷಧ ಕೊಡಬೇಕೆಂದು ವೈದ್ಯನಿಗೆ ಮೊದಲೇ ತಿಳಿಸಿದ್ದನು.

ವೈದ್ಯನು ಬಂದು ನಾಡಿಯನ್ನು ನೋಡಿ ಜ್ವರವು ಬಹಳ ಅವೆ; ಬೆಳಗು ಮುಂಜಾನೆ ಕಡಿಮೆಯಾಗುವವು. ಭಯಪಡುವ ಕಾರಣವೇನೂ ಇಲ್ಲ, ಎಂದು ಹೇಳಿ ಎರಡು ಗುಳಿಗೆಗಳನ್ನು ಕೊಟ್ಟು ರಾತ್ರಿ ಎರಡು ತಾಸಿನ ಅಂತರದಿಂದ ಅವನ್ನು ಕೊಡಲಿಕ್ಕೆ ಹೇಳಿದನು.

ಬಸವಂತನು ಅಂದಿನರಾತ್ರಿಅಲ್ಲಿಯೇ ಇದ್ದನು. ರಾತ್ರಿ ಬಸವಂತನೂ ಕಮಲೆಯೂ ಎಚ್ಚರಿಕೆಯಿಂದಿದ್ದು ರೋಗಿಯ ಶುಶ್ರೂಷೆಮಾಡಿದರು. ಬೆಳಗುಮುಂಜಾನೆ

ಗಂಗಾಬಾಯಿಗೆ ಜ್ವರಕಡಿಮೆಯಾದವು. ರೋಗಿಗೆ ಸ್ವಲ್ಪ ಸಮಾಧಾನವೂ ಆಯಿತು.

ದೇಸಾಯಿಯರ ಮನೆಗೆ ಹಿಂದಿನ ದಿವಸ ಗದಗಿನ ಡಾಕ್ಟರರು ಬಂದಿದ್ದರು. ಆ ಸುದ್ದಿಯನ್ನು ಬಸವಂತನು ರಾತ್ರಿ ಕಮಲೆಯ ಮುಂದೆ ಹೇಳಿದ್ದನು. ಕಮಲೆಯು ಬೆಳಗಾದ ಕೂಡಲೆ ಬಸವಂತನ ಹತ್ತರ ಬಂದು—ಅಪ್ಪನಿಗೆ ಇಂದು ಸ್ವಲ್ಪ ಗುಣಕಾಣುತ್ತದೆ, ಆದರೂ ನಿನ್ನೆ ಬಂದ ಡಾಕ್ಟರನನ್ನು ಕರೆದುಕೊಂಡು ಬರುವಿಯಾ? ಎಂದು ಕೇಳಿದಳು.

ಬಸವಂತನು ಹೂ, ಎಂದು ಹೇಳಿ ದೇಸಾಯಿಯರ ಮನೆಯ ಹಾದೀ ಹಿಡಿದನು. ಕಮಲೆಯು ಆಗ ಬೇರೆ ಒಂದು ಕಂಬಳಿಹಾಸಿ ಲೋಡು ಇಟ್ಟು ತಾಯಿಯನ್ನು ಎಬ್ಬಿಸಿ ಅಲ್ಲಿ ಕೂಡ್ರಿಸಿ, ಅವಳ ಹಾಸಿಗೆಯನ್ನು ಝಾಡಿಸಿ ಹಾಸಿದಳು; ಮತ್ತು ತಾಯಿಯನ್ನು ಕುರಿತು—ಅವ್ವಾ, ಇಂದು ಹೇಗೆ ಅದೆ? ಎಂದುಕೇಳಿದಳು.

ಮಗಳ ದೀನಸ್ವರವನ್ನು ಕೇಳಿ ಗಂಗಾಬಾಯಿಯು ಆನಂದದ ಕಳೆಯನ್ನು ತಂದುಕೊಂಡು—ಇಂದು ನನಗೆ ಸ್ವಲ್ಪ ಗುಣತೋರುವದು, ಎಂದಳು.

ತಾಯಿಯು ಮಾತಿನಿಂದ ಕಮಲೆಗೆ ತುಸ ಧೈರ್ಯ ಬಂತು. ಅವಳು ತಾಯಿಯನ್ನು ಕುರಿತು—ಬಿಸಿ ನೀರು ತಂದು ಕೊಡುವೆನು, ಮುಖತೊಳೆದುಕೊಂಡು ಸ್ವಲ್ಪ ಜಪ ಮಾಡು; ಮತ್ತು ಒಂದು ಉತ್ತತ್ತಿ ಕೊಡುವೆನು ತಿನ್ನು, ಎಂದಳು.

ಹಿಂದಿನರಾತ್ರಿ ಬಹಳ ಜ್ವರ ಬಂದ ಕಾರಣ ತಾಪದಿಂದ ಅವಳ ಬಾಯಾರಿತ್ತು; ಕಾರಣ ಅವಳು ಮಗಳ ಹೇಳಿಕೆಯ ಮೇರೆಗೆ ಮೋರೆಯನ್ನು ತೊಳಕೊಂಡು ಜಪ ಮಾಡಲಿಕ್ಕೆ ಕುಳಿತಳು.

ಕಮಲೆಯು ದೇವರ ಮನೆಗೆ ಹೋಗಿ ದೇವರ ಕಟ್ಟೆಯ ಮುಂದೆ ಸಾರಿಸಿ ರಂಗವಲ್ಲಿಯನ್ನು ಹಾಕಿ ದೇವರ ಎದುರಿಗೆ ಕೈ ಮುಗಿದುಕೊಂಡು—“ದೇವಾ, ಮನುಷ್ಯನು ತನ್ನ ಐಶ್ವರ್ಯ ಗರ್ವಗಳಲ್ಲಿ ಅಭಿಮಾನ ಹೊಂದಿ ನಿನ್ನನ್ನು ಮರೆತು ಬಿಡುವನು. ನಿನ್ನ ಶಕ್ತಿಯ ಮುಂದೆ ಮನುಷ್ಯನ ಪಾಡೇನು? ಪರಮಾತ್ಮಾ, ನನ್ನಂಥ ಕ್ಷುದ್ರಳಿಂದೇನಾದೀತು? ಅನಾಥ ಬಂಧುವಾದ ನೀನೇ ನಮ್ಮ ತಾಯಿಗೆ ಗುಣ ಮಾಡಬೇಕಲ್ಲದೆ ಎರಡನೇಯವರಿಂದಾಗದು. ನಾನು ಯಾರ ಆಶ್ರಯದಲ್ಲಿದ್ದರೆ ಗೃಹಲಕ್ಷ್ಮೀ ಎಂದೆನಿಸಿಕೊಳ್ಳುತ್ತಿದ್ದೆನೋ ಅಂಥ ಪತಿಯು ನನ್ನನ್ನು ತ್ಯಜಿಸಿರುವನು. ತಾಯಿಯ ಹೊರತು ನನ್ನವರೆಂಬುವವರು ಯಾರೂ ಇಲ್ಲ. ಕಾರಣ ನಮ್ಮ ತಾಯಿಗೆ ಗುಣವಾಗಲಿ, ಇಷ್ಟೇ ನನ್ನ ಪ್ರಾರ್ಥನೆ, ಎರಡನೇ ಯಾವ ಇಚ್ಛೆಯೂ ನನಗಿಲ್ಲ. ಈ ಪ್ರಕಾರ ಅನನ್ಯಭಾವದಿಂದ ಪ್ರಾರ್ಥಿಸಿ, ಎರಡು ಉತ್ತತ್ತಿ ಸ್ವಲ್ಪ ಕಲ್ಲಸಕ್ಕರೆಯನ್ನು ತಂದು ತಾಯಿಯ ಮುಂದೆ ಇಟ್ಟಳು.

ಗಂಗಾಬಾಯಿಯು ಒಂದು ಉತ್ತತ್ತಿಯನ್ನು ತಿಂದು ಹಾಸಿಗೆಯ ಮೇಲೆ ಮಲಗಿಕೊಂಡಳು. ಕಮಲೆಯು ತಾಯಿಯ ಕಾಲುಗಳನ್ನು ಒತ್ತಹತ್ತಿದಳು. ಆಗ ಗಂಗಾಬಾಯಿಯು ಮಗಳನ್ನು ಕುರಿತು—"ಕಮಲಾ, ನಾನು ನಿನಗೆ ಒಂದು ಮಾತನ್ನು ಹೇಳುತ್ತೇನೆ; ಆದರೆ ನೀನು ಗಾಬರಿಯಾಗಬೇಡ."

ಕಮಲೆ —ಅವ್ವಾ ಅದೇನು!

ಗಂಗಾ—ಒಂದು ವೇಳೆ ನಾನು ಈ ಬೇನೆಯಿಂದ ಸತ್ತರೆ ಮುಂದೆ ನಿನ್ನ ಗತಿ ಏನು? ಯಾರ ಆಶ್ರಯವದೆ?

ಆಗ ಕಮಲೆಯು ತನ್ನ ಬಲಗೈಯನ್ನು ತಾಯಿಯ ಬಾಯಿಮೇಲೆ ಇಟ್ಟು-ಅವ್ವಾ, ಬೇಡ-ಇಂಥ ಅಮಂಗಲ ಮಾತಾಡಬೇಡ. ದೇವರು ನಿನಗೆ ಗುಣಮಾಡುವನು. ನಿನ್ನಂಥ ತಾಯಿಯನ್ನು ಕಳಕೊಳ್ಳಲಿಕ್ಕೆ ನಾನೇನು ಅಂಥ ಪಾಪ ಮಾಡಿರುವೆನು?

ಇದೇ ವೇಳೆಯಲ್ಲಿ ಬಸವಂತನು ಹೊರಗೆ ಬಂದು—ಅಕ್ಕಾ, ಬಾಗಿಲ ತೆರೆ; ಧನಿಯರು ಡಾಕ್ಟರರನ್ನು ಕರೆದುಕೊಂಡು ಬಂದಿರುವರು, ಎಂದು ಒದರಿದನು. ದೇಸಾಯಿಯರು ಬಂದಿರುವರೆಂಬದನ್ನು ಕೇಳಿ ಕಮಲೆಗೆ ಸ್ವಲ್ಪ ಸಂತೋಷವಾಯಿತು. ಅವಳು ಒಂದು ಕಂಬಳಿಯನ್ನೂ ಜಮಖಾನಿಯನ್ನೂ ಹಾಸಿ ಬಾಗಿಲ ತೆರೆದಳು. ಬಸವಂತನು ಅವರನ್ನು ಒಳಗೆ ಕರೆದುಕೊಂಡು ಬಂದನು.

ಕಮಲೆಯು ಸಣ್ಣವಳಿದ್ದಾಗ ತಂದೆಯ ಸಂಗಡ ಅನೇಕ ಸಾರೆ ಭುಜಂಗರಾಯನ ಮನೆಗೆ ಹೋಗುತ್ತಿದ್ದಳು. ಅವನು ಕಮಲೆಯ ಮೇಲೆ ಮಗಳಂತೆ ಪ್ರೀತಿ ಮಾಡುತ್ತಿದ್ದನು. ಲಗ್ನವಾದ ಮೇಲೆ ಸಹ ಅವಳು ಎರಡು-ಮೂರು ಸಾರೆ ದೇಸಾಯಿಯರ ಮನೆಗೆ ಹೋಗಿದ್ದಳು; ಆದರೆ ತಂದೆಯ ಮರಣದ ತರುವಾಯ ಮಾತ್ರ ಹೋಗಿದ್ದಿಲ್ಲ.

ದೇಸಾಯಿಯರು ಸ್ನೇಹಪೂರ್ಣ ಸ್ವರದಿಂದ ಕಮಲೆಯನ್ನು ಕುರಿತು—"ತಂಗೀ,, ನಿಮ್ಮ ಅವ್ವನಿಗೆ ಈಗ ಹೇಗೆ ಅದೆ? ಎಂದು ಕೇಳಿದರು.

ಕಮಲೆ—ನಿನ್ನೆ ರಾತ್ರಿ ಜ್ವರ ಬಹಳ ಬಂದಿದ್ದವು. ಇದಕ್ಕೆ ಮುಂದೆ ಹೇಗೆ ಮಾಡಬೇಕು? ಎಂದಳು. ಆಗ ಅವಳ ಎರಡೂ ಕಣ್ಣುಗಳು ನೀರಿನಿಂದ ತುಂಬಿದವು.

ಭುಜಂಗರಾಯ—ತಂಗೀ, ಇದಕ್ಕೇಕೆ ಇಷ್ಟು ಚಿಂತೆ ಮಾಡುತ್ತಿ; ನಿಮ್ಮ ತಾಯಿಯ ವಯಸ್ಸು ಆಗಿದೆ, ಮೇಲಾಗಿ ದಾರುಣವಾದ ಚಿಂತೆಯು. ಹೀಗಾಗಿ ಬಹಳ ಕ್ಷೀಣವಾಗಿದ್ದಾಳೆ. ನಾನು ಬಸವಂತನ ಬಾಯಿಂದ ನಿಮ್ಮ ತಾಯಿಯ

ಅಜಾರಿಯ ಬಗ್ಗೆ ಮೇಲಿಂದ ಮೇಲೆ ಕೇಳುತ್ತಿರುತ್ತೇನೆ. ಈಗ ಬಂದಿರುವ ಡಾಕ್ಟರರು ಬಹಳ ಜಾಣರು. ಇವರ ಔಷಧದಿಂದ ಗುಣವಾಗ ಬಹುದು, ಎಂದು ಧೈರ್ಯ ಹೇಳಿದರು.

ದೇಸಾಯಿಯರ ಸಹಾನುಭೂತಿಯ ಮಾತುಗಳಿಂದ ಕಮಲೆಗೆ ಧೈರ್ಯ ಬಂತು. ಅವಳು ದೇಸಾಯಿಯರನ್ನು ಕುರಿತು—ನಿಮ್ಮ ಉಪಕಾರವು ನಮ್ಮ ಮೇಲೆ ಬಹಳವಾಯಿತು. ನಾವು ನಿಮಗೆ ಋಣಿಯಾಗಿರುವೆವು.

ಭುಜಂಗರಾಯ—ನಿಮ್ಮ ತಂದೆಯವರ ಉಪಕಾರವನ್ನು ತೀರಿಸಲಿಕ್ಕೆ ನಾನು ಅಸಮರ್ಥನು. ಇರಲಿ. ನಿಮ್ಮ ತಾಯಿಗೆ ಈಗ ನಿದ್ದೆ ಹತ್ತಿದಂತೆ ತೋರುತ್ತದೆ. ಗದ್ದಲವಾದರೆ ಎಚ್ಚರವಾದೀತು. ಡಾಕ್ಟರರು ಈಗ್ಗೇ ನಾಡಿಯನ್ನು ನೋಡಲೊಲ್ಲರೇಕೆ?

ಬಂದ ಡಾಕ್ಟರನು ಜಾಣನೆಂದು ಪ್ರಸಿದ್ಧನಾಗಿದ್ದನು. ಗದಗಿನಲ್ಲಿ ಅನೇಕ ಶ್ರೀಮಂತ ಮನೆತನದವರಿಗೆ ಇವನು ಔಷಧ ಕೊಡುತ್ತಿದ್ದನು. ಭುಜಂಗರಾಯನೂ ಪ್ರಸಂಗದಲ್ಲಿ ತನ್ನ ಮನೆತನದವರ ಔಷಧೋಪಚಾರಕ್ಕೆ ಈ ಡಾಕ್ಟರನನ್ನೇ ಕರೆಯಿಸುತ್ತಿದ್ದನು. ಡಾಕ್ಟರರು ನಾಡಿಯನ್ನು ಪರೀಕ್ಷಿಸಿದರು. ನಂತರ ದೇಸಾಯಿಯರನ್ನು ಕುರಿತು—ಇನ್ನೂ ಜ್ವರ ಇವೆ ನಾನು ಔಷಧ ಕೊಟ್ಟು ಹೋಗುತ್ತೇನೆ. ಆ ಔಷಧದಿಂದ ಜ್ವರ ಕಡಿಮೆಆಗುವವು; ಕಫವೂಕತ್ತರಿಸುವದು.

ಬಸವಂತನು ಡಾಕ್ಟರರ ಹ್ಯಾಂಡಬ್ಯಾಗ ತಂದು ಅವರ ಕೈಯಲ್ಲಿ ಕೊಟ್ಟನು. ಡಾಕ್ಟರನು ಪಾಕೀಟು ತೆಗೆದು ಎರಡು ಪ್ರಕಾರದ ಔಷಧಗಳನ್ನು ಕೊಟ್ಟು, ಈ ಔಷಧ ಹೇಗೆ ಕೊಡಬೇಕೆಂಬದನ್ನು ನಿಮ್ಮೂರ ವೈದ್ಯರಿಗೆ ತಿಳಿಸುತ್ತೇನೆ, ಎಂದನು.

ಔಷಧ ಕೊಟ್ಟು ಡಾಕ್ಟರರು ದೇಸಾಯರ ಸಂಗಡ ಹೊರಗೆ ಬಂದರು. ಬಸವಂತನೂ ಅವರ ಹಿಂದೆ ಬಂದನು. ಡಾಕ್ಟರನು ದೇಸಾಯರನ್ನು ಕುರಿತು—ಮನೆಯವರು ಗಾಬರಿಯಾದಾರೆಂದು ತಿಳಿದು, ನಾನು ಅವರ ಎದುರಿಗೆ ಮಾತಾಡಲಿಲ್ಲಿ. ದಾರುಣವಾದ ಚಿಂತೆಯಿಂದ ಕ್ಷಯರೋಗವುಂಟಾಗಿದೆ. ಅದು ತಾನು ಮಾಡತಕ್ಕ ಕಾರ್ಯವನ್ನು ಪೂರಾ ಮಾಡಿಬಿಟ್ಟದೆ. ಬದುಕುವ ಆಶೆ ತೀರ ಕಡಿಮೆ; ಆದರೂ ಔಷಧಪುರೋಗವನ್ನು ಕೆಲವು ದಿವಸ ಸ್ವಾಧೀನದಲ್ಲಿ ಇಟ್ಟುಕೊಳ್ಳುವದು. ಎಂದು ಹೇಳಿ, ವೈದ್ಯರಿಗೆ ಔಷಧೋಪಚಾರದ ಮಾಹಿತಿಯನ್ನು ಕೊಟ್ಟು, ದೇಸಾಯಿಯರ ಸಂಗಡ ಮನೆಗೆ ಹೊರಟನು; ಮತ್ತು ಹೋಗುವಾಗ ಬಸವಂತನನ್ನು ಕುರಿತು—ತಮ್ಮಾ ಈ ಸಂಗತಿಯನ್ನು ಆ ತಾಯಿ-ಮಕ್ಕಳಿಗೆ ತಿಳಿಸಬೇಡ. ತಿಳಿಸಿದರೆ ಎದೆಯೊಡಕೊಂಡಾರು, ಎಂದು ಹೇಳಿದನು.

[ ೮ ]

ಮನುಷ್ಯನು ಮನಸ್ಸನ್ನು ತನ್ನ ಆಧೀನದಲ್ಲಿಟ್ಟುಕೊಂಡಿರುವತನಕ ಪಾಪ ವೆಂಬ ಪಿಶಾಚಿಯು ಅವನನ್ನು ಸ್ಪರ್ಶಮಾಡಲಿಕ್ಕೆ ಅಂಜುತ್ತದೆ. ಒಮ್ಮೆ ಅವನು ಮನಸ್ಸಿನ ಆಧೀನನಾದರೆ ತೀರಿಹೋಯಿತು. ಕಡೆತನಕ ಅವನು ಮನಸ್ಸಿನ ಗುಲಾಮನಾಗಿ ಇರಬೇಕಾಗುವದು.

ಗೋವಿಂದರಾಯನು ತರುಣನು; ಮತ್ತು ಶ್ರೀಮಂತನು. ಈಗ ಕೆಲವು ದಿವಸಗಳ ಹಿಂದೆ ಪಾಪಕ್ಕೆ ಬಹಳ ಅಂಜುತ್ತಿದ್ದನು. ಆದರೆ ಹೆಂಡತಿಯು ಸತ್ತ ಬಳಿಕ ಅವನು ಪೂರ್ಣ ಅಂಧಃಪಾತದ ಮಾರ್ಗವನ್ನೇ ಸ್ವೀಕರಿಸಿದ್ದನು. ತಾರುಣ್ಯ, ಸಂಪತ್ತು, ಪ್ರಭುತ್ವ, ಅವಿವೇಕತನ ಈ ಚತುಷ್ಟಯುಗಳೊಳಗೆ ಒಂದೊಂದೇ ಮನುಷ್ಯನಿಗೆ ಅನರ್ಥವನ್ನುಂಟುಮಾಡಲಿಕ್ಕೆ ಸಾಕು. ಅಂದಬಳಿಕ ಇವುಗಳು ನಾಲ್ಕೂ ಒತ್ತಟ್ಟಿಗೆ ಕೂಡಿದಬಳಿಕ ಕೇಳುವದೇನು?

ಗೋವಿಂದರಾಯನ ತಂದೆಯು ಗದಗಿನಲ್ಲಿ ಊರಹೊರಗೆ ಒಂದು ಬಂಗ್ಲೆ ಯನ್ನು ಕಟ್ಟಿಸಿದ್ದನು. ಕಚೇರಿಯ ಕೆಲಸಕ್ಕೆ ಅಲ್ಲಿಗೆ ಹೋದಾಗ ಅವನು ಆ ಮನೆ ಯಲ್ಲಿಯೇ ಇರುತ್ತಿದ್ದನು. ಆ ಮನೆಯು ಈಗ ಗೋವಿಂದರಾಯನ ವಶದಲ್ಲಿತ್ತು. ಮೊದಲು ಅವನು ಗದಗಿನಲ್ಲಿ ಬಹುಕಾಲ ಇರುತ್ತಿದ್ದನು; ಆದರೆ ಅವನು ಈಗ ಬಹುಶಃ ಅಲ್ಲಿಗೆ ಹೋಗುತ್ತಿದ್ದಿಲ್ಲ. ಯಾಕಂದರೆ ಹಿಂದಕ್ಕೊಮ್ಮೆ ವೇಶ್ಯಾಸ್ತ್ರೀಯ ಮನೆಗೆ ಹೋಗಿ ಬ್ರಾಂಡಿ ಕುಡಿದು ಮೈಮೇಲೆ ಎಚ್ಚರವಿಲ್ಲದೆ, ಅವರ ಮನೆಯಲ್ಲಿ ಒಬ್ಬರ ತಲೆಯನ್ನು ಒಡೆದಿದ್ದನು. ಈ ವಿಷಯದಲ್ಲಿ ಗೋವಿಂದರಾಯನ ಮೇಲೆ ಫಿರ್ಯಾದಿ ಸಹ ಆಗಿತ್ತು. ಆಗ ಅವನು ಬಹಳ ಹಣಕೊಟ್ಟು, ಆ ಪ್ರಕರಣವನ್ನು ತಮ್ಮೊಳಗೆ ಬಗೆಹರಿಸಿಕೊಂಡು, ಆ ಪೇಚಿನಿಂದ ಪಾರಾಗಿದ್ದನು. ಆಗಿನಿಂದ ಅವನು ಗದಗಿನಲ್ಲಿ ಇರುವದನ್ನು ಕಡಿಮೆ ಮಾಡಿದ್ದನು.

ಗೋವಿಂದರಾಯನ ಮಿತ್ರರೂ ದೇವರ ಶಾಂತಿಮಯ ಪುಣ್ಯ ಸಂಸಾರ ದಿಂದ ಹೊರಗೆ ಹಾಕಲ್ಪಟ್ಟರು. ಇವರಲ್ಲಿ ಗದಗಿನ ಮಾಧವರಾಯನೂ, ರುದ್ರ ಪ್ಪನೂ, ಮೀನಾಕ್ಷಿಯೂ ಮುಖ್ಯರು. ಈ ತ್ರಿದೋಷಗಳೇ ಗೋವಿಂದರಾಯ ನಿಗೆ ಕ್ಷಯರೋಗವನ್ನುಂಟುಮಾಡಿದ್ದವು. ರಾಕ್ಷಸಿಯಾದ ಮೀನಾಕ್ಷಿಯು ತನ್ನ ದೂರದ ಆಪ್ತತ್ವವುಳ್ಳ ಒಬ್ಬ ದರಿದ್ರ ವಿಧವೆಗೆ ಹಣದ ಆಶೆಯನ್ನೂ, ಭವಿಷ್ಯತ್ತಿನ

ಸುಖದ ಆಶೆಯನ್ನೂ ತೋರಿಸಿ, ಅವಳನ್ನು ಪತ್ನಿಹೀನನಾದ ಗೋವಿಂದರಾಯನ ಕಾಮುಜ್ವಾಲೆಗೆ ಆಹುತಿ ಕೊಟ್ಟಿದ್ದಳು. ಅವಳ ಹೆಸರು ಶಾರದಾ. ಗೋವಿಂದ ರಾಯನು ಅವಳನ್ನು ತನ್ನ ತೋಟದಲ್ಲಿಯ ಬಂಗ್ಲೆಯಲ್ಲಿ ಇಟ್ಟಿದ್ದನು. ಅವನ ಆದ ರಕ್ಕೆ ಪಾತ್ರಳಾದ ಶಾರದೆಯು ಈಗ ಯಾವದೋ ಒಂದು ಕಾರಣದಿಂದ ಅವನ ಅನಾದರಕ್ಕೆ ಪಾತ್ರಳಾಗಿದ್ದಳು. ಮತ್ತು ಈಗ ಅವಳು ಮೀನಾಕ್ಷಿಯ ಮನೆಯ ಲ್ಲಿ ಇರಹತ್ತಿದ್ದಳು. ಅವಳು ಮೀನಾಕ್ಷಿಯನ್ನು ಕ್ರೂರ ಸರ್ಪದಂತೆ ಭಾವಿಸಿ, ಅವಳಿಂದ ಆದಷ್ಟು ದೂರ ಇರಲಿಕ್ಕೆ ಪ್ರಯತ್ನಿಸುತ್ತಿದ್ದಳು. ಆದರೆ ಅವಳಿಗೆ ಸಮಾಜದಲ್ಲಿ ಆಶ್ರಯವು ಸಿಗುವಂತೆ ಇದ್ದಿಲ್ಲ. ಗೋವಿಂದರಾಯನೂ ತಿರಸ್ಕರಿಸಿ ಬಿಟ್ಟಿದ್ದನು. ಮೀನಾಕ್ಷಿಯ ಹೊರತು ಅವಳಿಗೆ ಎರಡನೆಯ ಕಡೆಗೆ ಆಶ್ರಯವು ಸಿಗುವಂತೆಇದ್ದಿಲ್ಲ. ಕಾರಣ ಅನಿರ್ವಾಹವೆಂದು ಅವಳ ಮನೆಯಲ್ಲಿ ಇರುತ್ತಿದ್ದಳು.

ಗೋವಿಂದರಾಯನು ಯಾವಾಗಾದರೊಮ್ಮೆ ನೆನಪಾದಾಗ ಶಾರದೆಯನ್ನು ಬಂಗ್ಲೆಗೆ ಕರೆಯಿಸುತ್ತಿದ್ದನು. ಅವಳು ಒಮ್ಮೊಮ್ಮೆ ತಾನೇ ಹೋಗುತ್ತಿದ್ದಳು.

ಹಣದ ಸಲುವಾಗಿ ಮೀನಾಕ್ಷಿಯು ಮಾಡದ ಕೆಲಸಗಳೇ ಇದ್ದಿಲ್ಲ. ಅವಳು ಗೋವಿಂದರಾಯನ ಮನೆಯಿಂದ ಹೊರಟುಹೋದ ತರುವಾಯ ಮರು ದಿವಸವೇ ಭಿಕ್ಷುಕಿಯ ವೇಷದಿಂದ ರಾಮುಪುರಕ್ಕೆ ಹೋದಳು. ಮತ್ತು ಅಲ್ಲಿಗೆ ಹೋಗಿ ಕಮಲೆಯ ಸಂಬಂಧದ ಎಲ್ಲ ಮಾಹಿತಿಯನ್ನೂ ತಿಳಕೊಂಡು ಬಂದಳು. ಇಷ್ಟೇ ಅಲ್ಲ; ಅವಳ ಕೈಯಿಂದ ಒಂದು ಮುಷ್ಟಿ ಕಾಳು ಸಹ ಹಾಕಿಸಿಕೊಂಡು ಬಂದಳು.

ಗೋವಿಂದರಾಯನು ಕಣ್ಣು ಮುಚ್ಚಿಕೊಂಡು ಕಮಲೆಯ ರೂಪವನ್ನು ಕಲ್ಪಿಸಹತ್ತಿದನು. ಅವನ ಚಿಂತೆಯ ಸಂಗಡ ಸುವಾಸಿಕ ತಂಬಾಕದ ಹೊಗೆಯು ಆ ಕೋಣೆಯನ್ನೆಲ್ಲ ವ್ಯಾಪಿಸಹತ್ತಿತು. ಅಷ್ಟರಲ್ಲಿ ಮೀನಾಕ್ಷಿಯ ಸ್ವರ ಕೇಳಿದ ಕೂಡಲೆ ಅವನು ಎಚ್ಚತ್ತು, ಕಣ್ಣು ತೆಗೆದು—"ಮೀನಾಕ್ಷೀ, ಬರಲಿಕ್ಕೆ ಎಷ್ಟು ಹೊತ್ತು ಮಾಡಿದೆಯಲ್ಲ?"

ಮೀನಾಕ್ಷಿಯು ನಗುತ್ತ—ಆ ಬಗ್ಗೆ ಹಿಂದಿನಿಂದ ಹೇಳುವೆನು. ನನಗೆ ಇನಾಮು ಏನು ಕೊಡುವಿರಿ, ಮೊದಲು ಹೇಳಿರಿ.

ಗೋವಿಂದರಾಯನು ಮುಗುಳು ನಗೆಯಿಂದ—ಅದಕ್ಕೇಕೆ ಚಿಂತೆಯನ್ನು ಮಾಡುವಿ? ನೀನು ಎಂದಾದರೂ ಹಣವಿಲ್ಲದೆ ಕೆಲಸ ಮಾಡಿರುವಿ ಏನು? ಇರಲಿ, ಸುದ್ದಿಯನ್ನು ಹೇಳು.

ಮೀನಾಕ್ಷಿ—ರಾಮಪುರದಲ್ಲಿ ನಮ್ಮ ಅಬಚಿಯ ಮನೆಯಿರುವದು. ನಮ್ಮ ಅಬಚಿಯು ಹಾಲು-ಮೊಸರು ಮಾರುವಳು. ಬಳವಂತರಾಯನ ಮನೆಯವರೂ ಅಲ್ಲಿಯೇ ಹಾಲು ಮೊಸರು ಒಯ್ಯುವರು. ಕಾರಣ ಅವಳಿಗೆ ಆವರ ಮನೆಯ ಸುದ್ದಿ ಎಲ್ಲವೂ ಗೊತ್ತಿದೆ.

ಗೋವಿಂದರಾಯನು ಜಾಯೊಳಗಿನ ಸಿಗರೇಟ ಹೊರಗೆ ತೆಗೆದು ಅದನ್ನು ಝಾಡಿಸಿ ಮೀನಾಕ್ಷಿಯನ್ನು ಕುರಿತು—ಅದೆಲ್ಲವೂ ಆಯಿತು ಹೊಸ ಸುದ್ದಿ ಏನು? ಮೊದಲು ಹೇಳು.

ಮೀನಾಕ್ಷಿ—ನನಗೆ ಗೊತ್ತಾದ ಸುದ್ದಿಯು ನಿಮಗೆ ಅನುಕೂಲವಾಗುವಂತೆ ಇರುವದು; ಸದ್ಯಕ್ಕೆ ಅವರು ಬಹಳ ದರಿದ್ರಾವಸ್ಥೆಯಲ್ಲಿರುವರು. ಈಗ ಅವರಿಗೆ ದಿನದ ಹೊಟ್ಟೆ ತುಂಬಿಕೊಳ್ಳುವದೇ ಕಠಿಣವಾಗಿದೆ. ಮೇಲಾಗಿ ಗಂಡನು ಕಮಲೆಯನ್ನು ಬಿಟ್ಟಿರುವನಂತೆ! ಇಷ್ಟೇಅಲ್ಲ. ಕಮಲೆಯ ತಾಯಿಗೆ ಜಡ್ಡು ಬಹಳಿದ್ದು, ಹಾಸಿಗೆ ಹಿಡಿದು ಬಿಟ್ಟರುವಳು. ಮೊನ್ನೆ ಆ ಊರ ದೇಸಾಯಿಯರಾದ ಭುಜಂಗರಾಯರು ಗದಗಿನಿಂದ ಡಾಕ್ಟರನನ್ನು ಕರಿಸಿ ಔಷಧ ಕೊಡಿಸಿರುವರಂತೆ ತಿಳಿಯಿತೆ.

ಹಾವುಗಾರರ ಬುಟ್ಟಿಯೊಳಗಿನ ಸರ್ಪವು ಗಾರುಡಿಗನ ತಮ್ಮಡಿಯ ಸ್ವರವನ್ನು ಕೇಳಿದ ಕೂಡಲೆ ಬುಟ್ಟಿಯಲ್ಲಿಯೇ ಹೇಗೆ ತನ್ನ ಹೆಡೆಯನ್ನು ಮೇಲಕ್ಕೆ ಎತ್ತುವದೋ ಅದೇ ಪ್ರಕಾರ ಭುಜಂಗರಾಯನ ಹೆಸರು ಕೇಳಿದ ಕೂಡಲೆ ಗೋವಿಂದರಾಯನ ಸ್ಥಿತಿಯು ಆಯಿತು. ಅವನು ತಿರಸ್ಕಾರದಿಂದ—ಓಹೋ ನೋಡುವವರಿಗೆ ಸಂಭಾವಿತನಂತೆ ಕಾಣುತ್ತಾನೆ. ಆದರೆ ಒಳಗಿಂದೊಳಗೆ ಇಂಥ ಕಲ್ಯಾಣ ಗುಣಗಳು ತುಂಬಿವೆ. ಕಮಲೆಗೂ ಅವನಿಗೂ ಏನಾದರೂ ಸಂಬಂಧ ಇರಲಿಕ್ಕೇ ಬೇಕು. ಇಲ್ಲವಿದ್ದರೆ ಅವಳ ತಾಯಿಗೆ ಜಡ್ಡು ಆದರೆ ಇವನೇಕೆ ಗದಗಿನ ಡಾಕ್ಟರನನ್ನು ಕರೆಯಿಸುತ್ತಿದ್ದನು?

ಮೀನಾಕ್ಷಿ--ನಿಮ್ಮ ಮಾತು ನಿಜವು; ಏನಾದರೂ ಸಂಬಂಧವಿರಲಿಕ್ಕೆ ಬೇಕು.

ಗೋವಿಂದರಾಯನು ಕೆಲಹೊತ್ತು ವಿಚಾರಿಸಿ—ಮೀನಾಕ್ಷೀ ಇದಕ್ಕೆ ಮುಂದೆ ಉಪಾಯವೇನು?

ಮೀನಾಕ್ಷಿ— (ಗರ್ವದಿಂದ) ಹುಜೂರ, ನೀವೂ ದೇಸಾಯಿಯರಲ್ಲವೇನು? ನಿಮಗೂ ಜನರಿಲ್ಲವೇನು? ಶಾರದಾನನ್ನು ತರುವಾಗ್ಗೆ ಎಷ್ಟು ಕಾರಸ್ಥಾನ ಮಾಡಬೇಕಾಯಿತು. ಗೊತ್ತಿಲ್ಲವೇ? ನೀವೇ ಹೀಗೆ ನಿರಾಶರಾದರೆ ನಮಗೆ ಕೆಲಸ ಮಾಡಲಿಕ್ಕೆ ಉತ್ಸಾಹವೇ ಹುಟ್ಟುವದಿಲ್ಲ.

ಇದೇ ವೇಳೆಯಲ್ಲಿ ಇಬ್ಬರು-ಮೂರು ಮಂದಿ ನಗುವ ಧ್ವನಿ ಕೇಳಿತು; ಅಷ್ಟರಲ್ಲಿ ಒಬ್ಬ ಸೇವಕನು ಬಂದು—"ಹುಜೂರ ಗದಗಿನ ರಾವಸಾಹೇಬರು ಬಂದಿರುವರು" ಎಂದನು. ಆ ರಾತ್ರಿಯಲ್ಲಿ ಒಮ್ಮಿಂದೊಮ್ಮೆ ಸನ್ಮಿತ್ರರ ಆಗಮನ ವಾದದ್ದು ಕೇಳಿ ಅವನು ಗೊಂದಲದಲ್ಲಿ ಬಿದ್ದನು. ಮೀನಾಕ್ಷಿಯನ್ನು ಕುರಿತು—ಈಗ ನೀನು ಹೋಗು; ಹಿಂದಿನ ಕೋಣೆಯಲ್ಲಿರು. ಇನ್ನೊಮ್ಮೆ ನನಗೆ ಭಟ್ಟಿಯಾಗು ವವರೆಗೆ ಇಲ್ಲಿಂದ ಹೋಗಬೇಡ. ಆಗ ಮೀನಾಕ್ಷಿಯು ಕೂಡಲೆ ಆ ಕೋಣೆಯಿಂದ ಹೊರಬಿದ್ದು ಅಟ್ಟದ ಕೆಳಗಿನ ಒಂದು ಕೋಣೆಗೆ ಹೋದಳು. ಆದರೆ ಅಲ್ಲಿ ದೀಪವಿಲ್ಲದ್ದರಿಂದ ಕತ್ತಲಗವಿದಿತ್ತು. ಆ ಕೋಣೆಯ ಎದುರಿಗೆ ಅಟ್ಟದ ಮೇಲೆ ಹೋಗಲಿಕ್ಕೆ ಪಾವಟಿಗೆಗಳು ಇದ್ದವು. ಕಾರಣ ಅವಳು ಬಹಳ ಹೊತ್ತು ಹೊರಗೆ ನಿಲ್ಲುವಂತೆ ಇದ್ದಿಲ್ಲ. ಯಾಕಂದರೆ ಆ ನೂತನ ಜನರು ಅಲ್ಲಿಂದಲೇ ಮೇಲೆ ಹೋಗತಕ್ಕವರು, ಆದ್ದರಿಂದ ಅವಳು ಆ ಕತ್ತಲೆಯ ಕೋಣೆಯೊಳಗೇ ಹೋದಳು. ಇತ್ತ ಆ ಜನರು ಅಟ್ಟದ ಪಾವಟಿಗೆಗಳನ್ನು ಏರ ಹತ್ತಿದರು.

ಮಿತ್ರರ ಬೂಟುಗಳ ಸಪ್ಪಳವು ಪಾವಟಿಗೆಗಳ ಮೇಲೆ ಆಗುವದನ್ನು ಕೇಳಿದ ಕೂಡಲೆ ಗೋವಿಂದರಾಯನು ಕೋಣೆಯ ಹೊರಗೆ ಬಂದು ಆನಂದದಿಂದ ಗಟ್ಟಿಯಾಗಿ—"Quite unexpected Hallo" ಎಂದನು. ಆಗ ಆ ಆಗಂತುಕರಲ್ಲಿ ಒಬ್ಬನು ಮುಂದೆ ಬಂದು ಸಾಹೇಬಿ ಪದ್ಧತಿಯ ಶೇಕ ಹ್ಯಾಂಡ ಮಾಡಿ ಆನಂದದಿಂದ ನಗುತ್ತ—"How do you Mr. Desai we are quite. unexpected" ಎಂದನು.

ಈ ಪ್ರಕಾರ ಆದರ-ಸತ್ಕಾರಗಳು ಆದನಂತರ ಗೋವಿಂದರಾಯನು ಇಬ್ಬರೂ ಮಿತ್ರರನ್ನು ಕೋಣೆಯೊಳಗೆ ಕರೆದುಕೊಂಡು ಹೋಗಿ ಒಂದು ಟೇಬಲ್ಲಿನ ಮುಂದಿರುವ ಖುರ್ಚಿಯಮೇಲೆ ಕೂಡಲಿಕ್ಕೆ ಹೇಳಿ ತಾನೂ ಕುಳಿತನು. ನಂತರ—"ಮಿಷ್ಟರ ಮಾಧವ ಮತ್ತು ಡೆಂಡೀಜ ನಿಮ್ಮನ್ನು ಇಂದು ಕಂಡು ಬಹಳ ಆನಂದವಾಯಿತು. ಬರುವಾಗ ಮೊದಲೇ ಸುದ್ದೀ ತಿಳಿಸಬೇಕಾಗಿತ್ತು.

ಮಾಧವನು ಒಂದು ಸಿಗರೇಟು ತೆಗೆದು ಹೊತ್ತಿಸಿ ನಗುತ್ತ—ತಿಳಿಸಿ ಬರುವದಕ್ಕಿಂತ ಹೀಗೆ ಬಂದದ್ದೇ ಬಹಳ ಉತ್ತಮ.

ಗೋವಿಂದ—ಇದು ಹಳ್ಳಿಯ ಊರು ನಿಮ್ಮ Receptiou ದ ನಿಮ್ಮ ಸಲುವಾಗಿ ಚಲೋ ವ್ಯವಸ್ಥೆ ಮಾಡಲಿಕ್ಕೆ ಅನುಕೂಲವಾಗುವದಿಲ್ಲ.

ಡೆಂಡೀಜ—ಅದರಲ್ಲೇನು? ನಾವು ಹೊರಗಿನವರಲ್ಲ. ನಿನ್ನ ವಿಷಯದಲ್ಲಿ ಬೇರೆ ಭಾವನೆ ಇದ್ದರೆ, ನಾವು ಗದಗೆ ಬಿಟ್ಟು ಈ ಹಳ್ಳಿಗೆ ಯಾಕೆ ಬರುತ್ತಿದ್ದೆವು?

ಗೋವಿಂದರಾಯನು ಸಂತೋಷದಿಂದ—Thank you very much.

ಮಾಧವರಾಯನು ಗೋವಿಂದರಾಯನ ಪರಮ ಮಿತ್ರನು. ಅವನು ಅಬಕಾರಿ ಖಾತೆಯಲ್ಲಿ ಒಂದು ಹುದ್ದೆಯ ಜಾಗೆಯಮೇಲೆ ಇದ್ದನು. ಮತ್ತು ಗೋವಿಂದರಾಯನ ಲಹರಿಯಂತೆ ನಡೆದು, ತನ್ನ ಚೈನಿ ನಡೆಯಿಸಿಕೊಳ್ಳುವದರಲ್ಲಿ ಬಲು ಹುಷಾರಿಯು.

ದೇಸಾಯಿಯರ ಮಿತ್ರರ ಆಗಮನವನ್ನು ನೋಡಿ, ಅವರ ಆಳು ಚಹಾ ತಯಾರ ಮಾಡಲಿಕ್ಕೆ ಸುರುವುಮಾಡಿದ್ದನು. ಅವನು ಮೂರು ಕಪ್ಪು ಚಹಾ ತಂದು ಟೇಬಲ್ಲಿನ ಮೇಲೆ ಇಟ್ಟನು. ಗೋವಿಂದರಾಯನು ತನ್ನ ವಿಶ್ವಾಸಿಕ ಆಳನ್ನು ಕರೆದು, ಅವನ ಕಿವಿಯಲ್ಲಿ ಏನೋ ಹೇಳಿದನು. ಕೂಡಲೆ ಆ ಆಳು ಕೋಣೆಯಿಂದ ಹೊರಟುಹೋಯಿತು.

ಮಾಧವನು ಚಹಾ ಕುಡಿಯುತ್ತ—ಬ್ರದರ್, ಏನೇ ಅನ್ನು; ನೀನು ಗದಗು ಬಿಟ್ಟಾಗಿನಿಂದ ನಮಗೆ ಕೃಷ್ಣನಿಲ್ಲದ ವೃಂದಾವನದಂತೆ ಆಗಿದೆ. ನಿನಗೆ ನಮ್ಮಂತೆ ಆಗಿದೆಯೋ ಇಲ್ಲವೋ ಗೊತ್ತಿಲ್ಲ. ಆದರೂ ನಾನು Rural life ನ್ನು ಶಿಫಾರಸು ಮಾಡುವೆನು.

ಗೋವಿಂದ—ಯಾವ ಅವಸ್ಥೆಯಲ್ಲಿಯೇ ಇರಲಿ; ಸುಖವು ಮನಸ್ಸಿನ ಮೇಲೆ ಅವಲಂಬಿಸಿದೆ. ನಾನಂತೂ ಗದಗಿನಲ್ಲಿರುವದು ಆನಂದವೆಂದು ನಂಬಿರುವೆನು. ಆದರೆ ಅಂದು ವರ್ತಿಸಿದ ಫೌಜದಾರೀ ಸಂಗತಿಯನ್ನು ಜನರು ಮರೆಯುವವರೆಗೆ ನಾನು ಅಲ್ಲಿ ಇರಬಾರದೆಂದು ಮಾಡಿರುವೆನು. ಇದಲ್ಲದೆ, ಜಮೀನಿಯ ವ್ಯವಸ್ಥೆಯನ್ನು ಸ್ವತಃ ನೋಡುವದು ಅವಶ್ಯಕವು.

ಮಾಧವನು ಗೋವಿಂದರಾಯನ ಬೆನ್ನು ಚಪ್ಪರಿಸಿ—'Exactly so' ನಮ್ಮ ತಂದೆಯಾದರೂ ಬಹಳ ಹಣ ಗಳಿಸಿಟ್ಟಿದ್ದನು. ನಾನು ಅದರ ಅರ್ಧ ಭಾಗವನ್ನು 'ತಾರಾಬಾಯಿ'ಯ ಚರಣಕ್ಕೆ ಅರ್ಪಣ ಮಾಡಿಬಿಟ್ಟಿರುವೆನು. ಇದು 'Speculation' ಅಲ್ಲದೆ ಮತ್ತೇನು?

ಎಲ್ಲರೂ ನಗಹತ್ತಿದರು. ಗೋವಿಂದರಾಯನು—ನೀನು ಅಂಥವನೇ; ಮನುಷ್ಯನು ಸಾಯುವದರೊಳಗೆ ತನ್ನ ಇಚ್ಛೆಯನ್ನು ತೃಪ್ತಿಮಾಡಿಕೊಳ್ಳುವದು ಚಲೋದು. ಇರಲಿ. ನಿನ್ನ ತಾರಾಬಾಯಿಯಂಥ ಸುಂದರಿಯರು ಎಷ್ಟು ಮಂದಿ

ಇರುವರು? ಹೇಳಿದರೆ ನಿನಗೆ ಮುಖಸ್ತುತಿಯಾದೀತು. ನೀನು ಈ ವಿಷಯ ದಲ್ಲಿ ಡೇಂಡೀಜ ಮತ್ತು ನನಗಿಂತ ಮುಂದೊರೆದವನು.

ತರುವಾಯ ಆ ಮಂಡಳಿಯು ಆ ವಿಷಯುವನ್ನು ಬಿಟ್ಟು ಎರಡನೇ ಸುದ್ದಿ ಯನ್ನು ಸುರುವುಮಾಡಿತು. ರಾತ್ರಿಯು ಬಹಳವಾಗುವದನ್ನು ಕಂಡು ಗೋ-ವಿಂದರಾಯನು—ಅಡಿಗೆಯು ತಯಾರಾಗಿರಬಹುದು; ಇಲ್ಲಿಗೆ ತರಲಿಕ್ಕೆ ಹೇಳು ವೆನು, ಎಂದನು. ಸುಧಾರಣೆಯ ಮಿತ್ರರ ಸಲುವಾಗಿ ಸುಧಾರಣೆಯ ಆಹಾರದ ವ್ಯವಸ್ಥೆಯು ಮಾಡಲ್ಪಟ್ಟಿತ್ತು.

ಮೂವರೂ ಒಂದು ರೌಂಡ ಟೇಬಲ್ಲಿನ ಸುತ್ತಲೂ ಕುಳಿತರು. ಪೇಗದ ಮೇಲೆ ಪೇಗು ಹಾರುತ್ತಿದ್ದವು. ನಡುವೆ ಮದ್ಯ ಪ್ರಾಶನವೂ ಆಯಿತು.

ಇತ್ತ ಮೀನಾಕ್ಷಿಯು ಕತ್ತಲೆಯ ಕೋಣೆಯಲ್ಲಿ ದೇಸಾಯಿಯರ ಏಕಾಂತ ಭೆಟ್ಟಿಯ ಸಲುವಾಗಿ ಯೋಗ್ಯ ಸಮಯ ನಿರೀಕ್ಷಣೆ ಮಾಡುತ್ತ ಕುಳಿತುಬಿಟ್ಟಿ ದ್ದಳು. ತಗಣಿ ಚಿಕ್ಕಾಡಗಳು ಒಂದೇಸವನೆ ಅವಳ ರಕ್ತಶೋಷಣೆ ಮಾಡಹತ್ತಿ ದವು. ಕಡೆಗೆ ಅವಳು ಬೇಸತ್ತು ಮನೆಗೆ ಹೊರಟಳು.

ಮಾಧವನು ಗುಂಗಿನಲ್ಲಿ ಪಾವಟಿಗೆಗಳನ್ನು ಇಳಿದು ಕೆಳಗೆ ಬಂದಿದ್ದನು. ಅವನು ಮೀನಾಕ್ಷಿಯನ್ನು ನೋಡಿ—"ಮೀನಾಕ್ಷೀ, ಈಗ ನಿಮ್ಮ ರಾಯರ ಭೆಟ್ಟಿ ನಿನಗೆ ಆಗುವಂತಿಲ್ಲ. ನಾಳೆ ನಾನು ಮಾಡಿಸುವೆನು," ಎಂದನು. ಆಗ ಮೀನಾಕ್ಷಿಯು—ನೀವು ಈ ಬಗ್ಗೆ ಶ್ರಮ ತೆಗೆದುಕೊಳ್ಳುವ ಕಾರಣವಿಲ್ಲ. ಎಂದು ಹೇಳಿ, ಪಿಶಾಚಿಯಂತೆ ಆ ಅಂಧಕಾರವನ್ನು ಭೇದಿಸಿ ಮನೆಯ ಹಾದೀ ಹಿಡಿದಳು.

## [೯]

...

ಕಮಲೆಗೆ ಇಂದಿನ ದಿವಸವು ಅಶುಭವು. ಇಂದಿನ ದುಃಖದ ಪರಿಣಾಮ ವನ್ನು ಅವಳು ಬಹು ದಿವಸ ಅನುಭವಿಸಬೇಕಾಯಿತು.

ಗಂಗಾಬಾಯಿಗೆ ಹಿಂದಿನ ದಿವಸ ರಾತ್ರಿ ಜ್ವರವು ಹೆಚ್ಚಾಗಿ, ಬೆಳತನಕ ಸಂಕಟಪಟ್ಟಿದ್ದಳು; ಮತ್ತು ಅವಳ ಮೈಮೇಲೆ ಪೂರ್ಣ ಎಚ್ಚರ ಸಹ ಇದ್ದಿದ್ದಿಲ್ಲ. ಬಸವಂತನು ಅಂದಿನ ರಾತ್ರಿ ಅಲ್ಲಿಯೇ ಇದ್ದನು. ರೋಗಿಯು ಪಡುವ ಸಂಕಟ ವನ್ನೂ, ಕಮಲೆಯ ಶೋಕವನ್ನೂ ನೋಡಿ, ಮುಂದುಗಾಣದೆ ಗುಂಗಾದನು.

ಬೆಳಗಾದಕೂಡಲೆ ಬಸವಂತನು ಎಲ್ಲ ಸಂಗತಿಯನ್ನು ದೇಸಾಯರಿಗೆ ತಿಳಿಸ ಬೇಕೆಂದು, ಅವರ ಮನೆಯ ಹಾದೀ ಹಿಡಿದನು. ಕಮಲೆಯು ಮನೆಯ ಎಲ್ಲ ಕೆಲಸ ಗಳನ್ನು ಬಿಟ್ಟು ತಾಯಿಯ ಹತ್ತರ ಕುಳಿತುಬಿಟ್ಟಳು; ಮತ್ತು ಮೇಲಿಂದ ಮೇಲೆ ಮರ್ಮವೇದನೆಯಿಂದ ನಿಟ್ಟುಸಿರು ಬಿಡುತ್ತಿದ್ದಳು. ಮತ್ತು ಕಳೆಗುಂದಿದ ತಾಯಿಯ ಮುಖವನ್ನು ಒಂದೇಸವನೆ ನೋಡುತ್ತಿದ್ದಳು. ಅವಳ ಮನಸಿಲ್ಲಿ "ಈ ಜಗತ್ತಿನಲ್ಲಿ ನಿನ್ನವರೆಂಬವರು ಯಾರು ಇದ್ದರೋ? ಯಾರ ಮುಖವನ್ನು ನೋಡಿ ನೀನು ಈ ಸಂಸಾರದಲ್ಲಿ ಜೀವಧಾರಣ ಮಾಡಹತ್ತಿದ್ದಿಯೋ, ಅಂಥ ನಿನ್ನವರು ನಿನ್ನನ್ನು ಬಿಟ್ಟು ಅಗಲುವರು" ಎಂಬ ಕಲ್ಪನೆಗಳು ಹುಟ್ಟಲು ಅವಳ ಕಣ್ಣುಗಳಲ್ಲಿ ನೀರು ಬಂದವು; ಹೊಟ್ಟೆಯಲ್ಲಿ ಸಂಕಟವಾಗಹತ್ತಿತು. ಆಗ ಅವಳು ಸೆರಗಿನಿಂದ ಕಣ್ಣು ಮುಚ್ಚಿಕೊಂಡು—ಪರಮಾತ್ಮಾ, ಈ ಸಂಕಟದಿಂದ ನನ್ನನ್ನು ಉದ್ಧಾರ ಮಾಡು. ಸೃಷ್ಟಿಯ ಸ್ಥಿತಿ, ಲಯ ಕರ್ತನಾದ ಭಗವಂತಾ, ನನ್ನ ಸಲುವಾಗಿ ನಮ್ಮ ಅವ್ವನನ್ನು ಬದುಕಿಸು. ದೇವಾ ನನ್ನ ನಿರಾಶೆಮಯವಾದ ಮನಸ್ಸಿಗೆ ಶಾಂತಿಯ ನ್ನುಂಟುಮಾಡು; ಈ ದುಃಖವನ್ನು ನಾನು ಸಹಿಸಲಾರೆನು. ಹೀಗೆ ಕಾತರಭಾವ ದಿಂದ ಪ್ರಾರ್ಥಿಸಿದಳು.

ಇಷ್ಟರಲ್ಲಿ ಬಸವಂತನು ಅಲ್ಲಿಗೆ ಬಂದನು. ಕಮಲೆಯು ತಾಯಿಯ ಹಾಸಿಗೆ ಯಹತ್ತರ ಕುಳಿತು ಕಣ್ಣೀರು ಸುರಿಸುವದನ್ನು ನೋಡಿ ಅವನಿಗೆ ಬಹಳ ಸಂಕಟ ವಾಯಿತು. ಅವನಿಗೆ ದುಃಖವು ಬಂತು. ಆದರೂ ಅದನ್ನು ಬಿಗಿಹಿಡಿದು, ಕಮಲೆ ಯನ್ನು ಕುರಿತು—"ಛೀ ಹುಚ್ಚೀ ಇಂಥ ವೇಳೆಯಲ್ಲಿ ಹೀಗೆ ಧೈರ್ಯಗುಂದಬಾ ರದು. ನೀನು ತಿಳಿದವಳು; ಹೀಗೆ ಮಾಡಬೇಡ; ನಾನು ದೇಸಾಯಿಯರಿಗೆ ಸುದ್ದೀ ಹೇಳಿ ಬಂದಿರುವೆನು. ವೈದ್ಯರು ಈಗ ಒರುವರು.

ಭುಜಂಗರಾಯನು ತನ್ನ ತಾಯಿಯ ಸಲುವಾಗಿ ಗದಗಿನ ಡಾಕ್ಟರರನ್ನು ಇನ್ನೂ ಮನೆಯಲ್ಲಿ ಇಟ್ಟುಕೊಂಡಿದ್ದನು. ಬಸವಂತನು ಸುದ್ದೀ ಹೇಳಿದ ಕೂಡಲೆ ಡಾಕ್ಟರನನ್ನು ಕರಕೊಂಡು ಅಲ್ಲಿಗೆ ಬಂದನು. ಬಾಗಿಲ ಹತ್ತರ ಬಂದು ಬಸ ವಂತಾ ಎಂದು ಒದರಿದ ಕೂಡಲೆ ಬಸವಂತನು ಹೊರಗೆ ಬಂದನು.

ಭುಜಂಗ—ಈಗ ಹೇಗೆ ಅದೆ?

ಬಸವಂತ—ಹಾಗೇ ಅದೆ.

ಆಗ ಡಾಕ್ಟರನು ನಾಡಿಯನ್ನು ಪರೀಕ್ಷಿಸಿದನು. ಲಕ್ಷಣವು ಚನ್ನಾಗಿ ಕಾಣಲಿಲ್ಲ. ಅದರಿಂದ ಅವನು ಮುಖವನ್ನು ಸೊಟ್ಟ ಮಾಡಿದನು. ಆದರೂ ಕಮಲೆಯು ಎದೆಯೊಡಕೊಳ್ಳಬಾರದೆಂದು ಮಕರಧ್ವಜ ಮಾತ್ರೆಯನ್ನು ಸ್ವಹಸ್ತ

ದಿಂದ ಕೊಟ್ಟನು. ಕಮಲೆಗೆ ಅಂದಿನ ದಿವಸ ಸಮಾಧಾನವೇ ಇದ್ದಿಲ್ಲ.

ಅವಳು ಭುಜಂಗರಾಯನನ್ನು ಕುರಿತು—"ಕಾಕಾ, ಮುಂದೇನು ಗತಿ? ಅವ್ವನು ನಿಜವಾಗಿಯೂ ನಮ್ಮನ್ನು ಬಿಟ್ಟು ಹೋಗುವಳೇನು? ಇನ್ನು ನನಗೆ ಯಾರು ಗತಿ? ಎಂದು ದುಃಖಿಸಿ ಅಳಹತ್ತಿದಳು. ಈ ಹೃದಯದ್ರಾವಕ ದೃಶ್ಯದಿಂದ ಅವನಿಗೂ ದುಃಖ ಬಂತು. ಅವನು ಕಮಲೆಯನ್ನು ಕುರಿತು—ತಂಗೀ ನೀನು ನನ್ನ ಮಗಳ ಸರಿ. ಅಳಬೇಡ, ರೋಗವು ಕಠಿಣವಾದದ್ದು; ಆದರೂ ನಿರಾಶೆಯಾಗುವ ಕಾರಣವಿಲ್ಲ. ನಾನು ಇರುವ ವರೆಗೆ ಯಾವ ಪ್ರಕಾರದ ಕೊರತೆಯನ್ನೂ ನಿನಗೆ ಆಗಗೊಡುವದಿಲ್ಲ.

ಡಾಕ್ಟರನನ್ನೂ, ಬಸವಂತನನ್ನೂ ಕರಕೊಂಡು ಭುಜಂಗರಾಯನು ನಡುಮನೆಗೆ ಬಂದನು. ಮತ್ತೆ ಡಾಕ್ಟರನನ್ನು ಕುರಿತು—"ಲಕ್ಷಣವು ಹೇಗೆ ಕಾಣುತ್ತದೆ" ಎಂದು ಕೇಳಿದನು.

ಡಾಕ್ಟರನು ನಿರಾಶೆಯಿಂದ—ಅಂದಿನ ದಿವಸ ರೋಗಿಯನ್ನು ನೋಡಿದಾಗ ಬದುಕುವಳೆಂಬದಕ್ಕೆ ಸ್ವಲ್ಪ ಆಶೆಯಾದರೂ ಇತ್ತು. ಆದರೆ ಇಂದು ಅಷ್ಟು ಸಹ ಕಂಡು ಬರುವದಿಲ್ಲ. ಭಯಂಕರವಾದ ಸನ್ನಿಪಾತ; ಮೇಲಾಗಿ ಕ್ಷಯ. ಇಂದು ಸಂಜೆಗೆ ವಿಹಳವಾದರೆ ಮೂರು ತಾಸು ರಾತ್ರಿಗೆ ಕೈ ಬಿಡುವಳು.

ಆಗ ಭುಜಂಗರಾಯನು ಡಾಕ್ಟರನನ್ನೂ ಬಸವಂತನನ್ನೂ ಕರಕೊಂಡು ಹೊರಗಿನ ಕಟ್ಟಿಗೆ ಬಂದನು. ಕಟ್ಟಿಯ ಮೇಲೆ ಕುಳಿತು ಕೆಲವು ಹೊತ್ತು ಆಲೋಚಿಸಿ, ಮತ್ತೆ ಡಾಕ್ಟರನನ್ನು ಕುರಿತು—

ಭುಜಂಗ—ಬದುಕುವ ಆಶೆಯೇ ಇಲ್ಲವೇನು?

ಡಾಕ್ಟರ—ನನಗೆ ತಿಳಿದಷ್ಟರ ಮಟ್ಟಿಗೆ ನೋಡಿದೆನು. ನನಗಂತೂ ಹೀಗೆ ತೋರುತ್ತದೆ. ಆದರೂ ಅವರ ನಸೀಬ; ನೀವಂತೂ ಎಲ್ಲ ರೀತಿಯಿಂದ ಸಿದ್ಧತೆಯಲ್ಲಿರಬೇಕು.

ಈ ಮಾತುಗಳನ್ನು ಕೇಳಿ ಬಸವಂತನ ಕಣ್ಣೊಳಗೆ ನೀರು ಬಂದವು. ಅವನು ಮನಸ್ಸಿನಲ್ಲಿ—"ಮನುಷ್ಯನ ಜೀವವು ಎಷ್ಟು ಅಸ್ಥಿರವು? ಅಹಾ! ಯಾರು ನನ ತಾಯಿಗಿಂತ ಪ್ರೀತಿ ಮಾಡಿದರೋ, ಮತ್ತು ನನಗೆ ವಿಷಮಜ್ವರ ಬಂದಾಗ ರಾತ್ರಿ ಬೆಳತನಕ ಹಾಸಿಗೆಯ ಮೇಲೆ ಕುಳಿತು ಪ್ರೀತಿಯಿಂದ ನನಗೆ ಉಪಚಾರ ಮಾಡಿದರೋ, ಯಾರು ಜಾತಿಯಿಂದ ಬ್ರಾಹ್ಮಣರಿದ್ದು ನನ್ನ ವಿಷಯದಲ್ಲಿ ತಮ್ಮ ಹೊಟ್ಟೆಯ ಮಗನಂತೆ ಪ್ರೀತಿ ಮಾಡುತ್ತಿದ್ದರೋ ಅಂಥ ನಮ್ಮ ತಾಯಿಯು ಸಮಾ

ಸಮಾನಳಾದವಳು ತನ್ನ ನಶ್ವರವಾದ ದೇಹವನ್ನು ಬಿಟ್ಟು ಹೊರಟಳಲ್ಲ; ಛೀ! ಇಂಥ ನಶ್ವರ ಶರೀರದ ಮೇಲೆ ಮಮತೆ ಮಾಡಿ ಭ್ರಾಂತಿಯಿಂದ ದೇಹದ ಸಲುವಾಗಿ ಪಾಪಕರ್ಮಾಸಕ್ತನಾಗುವವನ ಮೂರ್ಖತನಕ್ಕೆ ಏನೆನ್ನಬೇಕು?'' ಬಸವಂತನು ಕಾತರಭಾವದಿಂದ ಭುಜಂಗರಾಯನ ಕಡೆಗೆ ನೋಡುತ್ತ—''ಹಾ-ಗಾದರೆ ನಮ್ಮ ಅಕ್ಕನ ಗತಿಯೇನು? ಆಗ ಭುಜಂಗರಾಯನು ಬಸವಂತನಿಗೆ ಧೈರ್ಯ ಕೊಡುವದರ ಸಲುವಾಗಿ—ಬಸವಂತಾ, ದೇವರು ನಿನಗೆ ಅನೇಕ ಸದ್ಗುಣಗಳನ್ನು ಕೊಟ್ಟಿರುವನು. ನೀನು ಹೀಗೆ ಚಂಚಲನಾದರೆ ಹೇಗೆ?

ಬಸವಂತ—ಹಾಗಾದರೆ ಮುಂದೆ ಹೇಗೆ ಮಾಡಬೇಕು? ಅವರ ಅವಸ್ಥೆಯಂತೂ ನಿಮಗೆ ಗೊತ್ತೇ ಇರುವದು.

ಭುಜಂಗ—ಆ ಬಗ್ಗೆ ನೀನು ಕಾಳಜಿ ಮಾಡಬೇಡ; ಬಳವಂತರಾಯನ ಪತ್ನಿಯ ಅಂತ್ಯವಿಧಿಯು ಭುಜಂಗರಾಯನ ತಾಯಿಯ ಅಂತ್ಯವಿಧಿಯೆಂದು ತಿಳಿದು ಸರಿಯಾಗಿ ಆಗಬೇಕು. ಅವಶ್ಯಕ ಜನರಿಗೆ ನಾನು ತಿಳಿಸಿರುತ್ತೇನೆ. ನೀನು ಪ್ರಸಂಗ ಒದಗಿದ ಕೂಡಲೆ ಶ್ರೀನಿವಾಸ ದೀಕ್ಷಿತರಿಗೆ ಸುದ್ದಿಯನ್ನು ಮಾತ್ರ ತಿಳಿಸು. ಅವರು ಎಲ್ಲ ಕಾರ್ಯಗಳನ್ನೂ ಮಾಡಿಸುವರು. ನಾನು ಮೊದಲೇ ಅವರಿಗೆ ತಿಳಿಸಿರುವೆನು; ಮತ್ತು ಈ ಇಪ್ಪತ್ತೈದು ರೂಪಾಯಿಗಳು ನಿನ್ನ ಹತ್ತಿರ ಇರಲಿ. ಮಧ್ಯಾಹ್ನಕ್ಕೆ ಮತ್ತೊಮ್ಮೆ ಡಾಕ್ಟರನನ್ನು ಕಳಿಸುವೆನು.

ಭುಜಂಗರಾಯನ ಉದಾರ ಮನಸ್ಸನ್ನು ನೋಡಿ ಬಸವಂತನಿಗೆ ಬಹಳ ಆನಂದವಾಯಿತು. ಆಗ ಅವನು ಮನಸ್ಸಿನಲ್ಲಿ—ನಾನಿನ್ನೂ ಅಪ್ರಬುದ್ಧನು; ಅಶಿಕ್ಷಿತನು; ನನ್ನಂಥ ಕ್ಷುದ್ರನ ಪ್ರಾರ್ಥನೆಯನ್ನು ದೇವರೇ ನೀನು ಕೇಳುವಂತೆ ಇದ್ದರೆ ನಾನು ಬೇಡಿಕೊಳ್ಳುವದೇನಂದರೆ, ಮನುಷ್ಯಕೋಟಿಯಲ್ಲಿ ದೇವಸಮಾನನಾದ ಮತ್ತು ಉದಾರಹೃದಯನಾದ ನಮ್ಮ ಭುಜಂಗರಾಯನನ್ನು ದೀರ್ಘಾಯುಷಿಯಾಗಿ ಮಾಡು; ಮತ್ತು ಅವನ ಮಕ್ಕಳು ಮರಿಗಳೂ, ಧನ ಸಂಪತ್ತೂ ವೃದ್ಧಿಯಾಗಲಿ; ಇವರ ಪುಣ್ಯಕ್ಕೆ ಅಳತೆಯೇ ಇಲ್ಲ. ಕೀರ್ತಿಗೆ ನಾಶವೇ ಇಲ್ಲ. ಎಂದು ಹೊಗಳುತ್ತ ಆ ರೂಪಾಯಿಗಳನ್ನು ಧೋತರದ ಚುಂಗಿನಲ್ಲಿ ಕಟ್ಟಿಕೊಂಡು ಹೋದನು.

[ ೧೦ ]

ಸಂಸಾರವು ಸುಖ-ದುಃಖದಿಂದ ಪರಿಪೂರ್ಣವಾದದ್ದು. ಯಾವನಾದರೊಬ್ಬನ ಚರಿತ್ರೆಯನ್ನು ಹೇಳಬೇಕಾದರೆ ಸುಖ-ದುಃಖಗಳ ಹೊರತು ಮತ್ತೇನೂ ಹೇಳಲಿಕ್ಕೆ ಬರುವದಿಲ್ಲ. ಅದೇ ಪ್ರಕಾರ ನಾವು ಕಮಲೆಯ ದುಃಖಮಯ ಜೀವನ ಕಥೆ ಹೇಳಬೇಕಾದರೆ ಇನ್ನು ಮುಂದೆ ಯಾವ ಯಾವ ಸಂಗತಿಗಳು ವರ್ತಿಸುವವೋ ಅವನ್ನೇ ಹೇಳುವೆವು.

ಮಧ್ಯಾಹ್ನದ ಬಿಸಿಲಲ್ಲಿಯೇ ಭುಜಂಗರಾಯರೂ, ಡಾಕ್ಟರರೂ ಗಂಗಾಬಾಯಿಯ ಪ್ರಕೃತಿಯನ್ನು ನೋಡಲಿಕ್ಕೆ ಬಂದರು. ಡಾಕ್ಟರನು ಗಂಗಾಬಾಯಿಯ ನಾಡಿಯನ್ನು ಪರೀಕ್ಷೆ ಮಾಡಿದನು. ಮಂದಶ್ವಾಸವು ಆರಂಭವಾಗಿತ್ತು. ಯಮನು ಅವಳ ತಲೆಯ ಹತ್ತರ ಆಸನ ಹಾಕಿ ಕುಳಿತಿದ್ದನು. ಡಾಕ್ಟರನು ಯಾವ ಮಾತಾಡದೆ ಒಂದು ಔಷಧವನ್ನು ಕೊಟ್ಟು ಕಮಲೆಗೆ ಸಮಾಧಾನ ಹೇಳಿ ದೇಸಾಯಿಯರ ಸಂಗಡ ಹೊರಗೆ ಬಂದನು.

ಸಂಜೆಯವರೆಗೆ ಕಮಲೆಯು ಒಂದೇಸವನೆ ತಾಯಿಯ ಶುಶ್ರೂಷಣೆಯನ್ನು ಮಾಡಿದಳು. ಅವಳಿಗೆ ಸ್ವಲ್ಪವಾದರೂ ವಿಶ್ರಾಂತಿ ಇದ್ದಿಲ್ಲ; ಸಂಜೆಯನಂತರ ಗಂಗಾಬಾಯಿಗೆ ಚೇತನೆ ಬಂದಿತು. ಅವಳು ಕ್ಷೀಣಸ್ವರದಿಂದ—ಕಮಲಾ! ಎಲ್ಲಿದ್ದೀಯವ್ವಾ!! ಎಂದಳು.

ಕಮಲೆಯು ತಾಯಿಯ ಮುಖದ ಕಡೆಗೆ ನೋಡುತ್ತ—ಅವ್ವಾ! ಇಕೋ ನೋಡು, ಇಲ್ಲಿಯೇ ಇರುವೆನು.

ಗಂಗಾಬಾಯಿಯು ನಿಟ್ಟುಸುರು ಬಿಟ್ಟು—ನನ್ನ ಕಾಲವು ತೀರಿತು. ನಾನು ನಿನ್ನ ಹಡೆದವರ ಹತ್ತರ ಹೋಗುವೆನು. ಇಕೋ ನೋಡು, ಅವರು ನನ್ನನ್ನು ಕರೆಯುತ್ತಾರೆ.

ಕಮಲೆಯು ಕಣ್ಣೀರು ಸುರಿಸುತ್ತ—ಅವ್ವಾ ಇಂಥ ಅಮಂಗಲ ಮಾತಾಡಬೇಡ. ನೀನು ಹೋದರೆ ನಾನು ಯಾರ ಹತ್ತರ ಇರಬೇಕು?

ಗಂಗಾಬಾಯಿ—ಯಾವದೇವರು ಈ ವರೆಗೆ ನಿನ್ನನ್ನು ಕಾಪಾಡಿರುವನೋ ಅವನೇ ನಿನ್ನನ್ನು ಕಾಪಾಡುವನು. ದೇವರಮೇಲೆ ವಿಶ್ವಾಸವಿಡು. ನಿನಗೇತರಚಿಂತೆ?

ಮುಂದೆ ಅವಳಿಂದ ಮಾತಾಡುವದಾಗಲಿಲ್ಲ. ಬಾಯಿತೆರೆದು ನೀರುಬೇಕೆಂದು ಸಂಜ್ಞೆ ಮಾಡಿದಳು.

ಕೂಡಲೆ ಕಮಲೆಯು ತಾಯಿಯ ಬಾಯಿಯಲ್ಲಿ ಒಂದು ಗುಟುಕು ನೀರು ಹಾಕಿದಳು. ಮುದುಕೆಯು ನೀರು ಗುಟಕರಿಸಿ"ಅಹಾ! ಎಷ್ಟು ಸುಖ" ಎಂದು ಮತ್ತೆ ಮಗಳ ಕಡೆಗೆ ನೋಡುತ್ತ—ದೇವರ ಮೇಲೆ ವಿಶ್ವಾಸವಿರಲಿ. ಪತಿಯ ಚರಣದಲ್ಲಿ ಭಕ್ತಿ ಇಡು. ಪತಿಯೇ ಸ್ತ್ರೀಯರಿಗೆ ದೇವರು. ಅವನು ಎಷ್ಟೇ ನಿಷ್ಠುರನಿರಲಿ, ಪಾಪಿಷ್ಠನಾಗಿರಲಿ ನಿನಗೆ ಅವನೇ ಸ್ವಾಮಿಯು. ನಮ್ಮ ಮನೋಹರನು ಚಿರಂಜೀವಿಯಾಗಲಿ. ಅವನು ಈಗ ವಿಚಾರಹೀನನಾಗಿರುವನು; ಆದರೂ ಮುಂದೆ ತಿಳುವಳಿಕೆ ಹುಟ್ಟಿದಮೇಲೆ ಪಶ್ಚಾತ್ತಾಪಪಡುವನು. ಮುಂದೆ ಮಾತಾಡುವದಾಗಲಿಲ್ಲ. ಅವಳು ಬಹಳೇ ನಿಶ್ಯಕ್ತಳಾಗಿದ್ದಳು.

ಗಂಗಾಬಾಯಿಯು ಮತ್ತೆ—ಕಮಲಾ, ಎಂದು ಒದರಿದಳು.

ಕಮಲೆ—ಯಾಕೆ?

ಗಂಗಾಬಾಯಿ—ಬಸವಂತನು ಎಲ್ಲಿ ಇರುವನು?

ಬಸವಂತನು ನಡುಮನೆಯ ಬಾಗಿಲ ಹತ್ತರ ಕುಳಿತಿದ್ದನು. ಕೂಡಲೆ ಅವನು ಎದ್ದುಬಂದು ನಮಸ್ಕಾರಮಾಡಿ—ಅವ್ವಾ ನಾನು ಇಲ್ಲಿಯೇ ಇರುವೆನು.

ಮುದುಕೆಯು ದುಃಖದಿಂದ—ತಮ್ಮಾ, ನಾನಂತೂ ಹೊರಟೆನು. ನಿಮ್ಮ ಅಕ್ಕನ ಕಡೆಗೆ ಲಕ್ಷವಿರಲಿ; ಈ ವೇಳೆಯಲ್ಲಿ ಮುದುಕೆಯ ಮುಖದ ಲಕ್ಷಣವು ಬದಲಾಯಿತು. ಅವಳು ತಲೆಬಾಗಿಲದ ಕಡೆಗೆ ನೋಡುತ್ತಿದ್ದಳು. ಅವಳು ಕೆಲ ಹೊತ್ತು ಬಾಗಿಲ ಕಡೆಗೆ ದಿಟ್ಟಿಸಿ ನೋಡಿ ಒಮ್ಮಿಂದೊಮ್ಮೆ-ಇಕೋ—ಇಕೋ-ಅವರು ನನ್ನನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿರುವರು, ಎಂದು ಚೀರಿದಳು. ಕಮಲೆಯೂ ಬಸವಂತನೂ ಗಾಬರಿಯಾಗಿ ನಾಲ್ಕೂ ದಿಕ್ಕಿಗೆ ನೋಡಿದರು. ಆಗ ಕಮಲೆಯು—ಇದೇನು? ಅವ್ವಾ ಹೀಗೇಕೆ ಮಾಡುವಿ? ಇಲ್ಲಿ ಯಾರೂ ಕಾಣುವದಿಲ್ಲವಲ್ಲ;

ಗಂಗಾಬಾಯಿಯು ಸ್ವಲ್ಪ ಗಟ್ಟಿಯಾಗಿ—ಇಲ್ಲ. ಇಲ್ಲ. ನೀನು ನೋಡಲಿಲ್ಲ. ನಾನು ಸ್ಪಷ್ಟವಾಗಿ ನೋಡಿದೆನು. ನಿನ್ನ ಹಡೆದವರು ಬಾಗಿಲದ ಹತ್ತರ ನಿಂತು ನನ್ನನ್ನು ಒದರಿದರು.

ಗಂಗಾಬಾಯಿಯು ಮತ್ತೊಮ್ಮೆ ಬಾಗಿಲ ಕಡೆಗೆ ನೋಡಿ—ಬಂದಿರಾ! ನನ್ನನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿರೇನು? ನಡೆಯಿರಿ. ನಾನು ನಿಮ್ಮ

ಸಂಗಡ ಬರುವೆನು. ಈ ಪ್ರಕಾರ ಮಾತುಮಾತಾಡುತ್ತ ಅವಳ ಮುಖಲಕ್ಷಣವು ತೀರ ಭಿನ್ನವಾಗಿ ಹೋಯಿತು. ನಾಡಿಗಳು ನಿಶ್ಚಲವಾದವು. ಶರೀರವು ತಣ್ಣಗಾಯಿತು.ಅವಳ ಜೀವಾತ್ಮನು ಈ ಜಡ ಶರೀರಬಿಟ್ಟು ಲೋಕಾಂತರಕ್ಕೆ ತೆರಳಿದನು.

ಕಮಲೆಯು ಒಮ್ಮಿಂದೊಮ್ಮೆ ಚೀರಿದಳು. ಅದೇ ಹೊತ್ತಿಗೆ ಭುಜಂಗರಾಯನ ಸೂಚನೆಯಂತೆ ಸಹಜವಾಗಿ ನೋಡಲಿಕ್ಕೆಂದು ಶ್ರೀನಿವಾಸದೀಕ್ಷಿತನೂ, ರಾಮಾಚಾರ್ಯರೂ ಬಂದರು. ಅವರು ನಾಡಿಯನ್ನು ನೋಡಿ ಎಲ್ಲವೂ ಪೂರ್ಣವಾಗಿ ಹೋಗಿದೆ. ಇನ್ನು ನಡು ಮನೆಯಲ್ಲಿ ಮಲಗಿಸೋಣ, ಎಂದರು.

ಆಗ ಕಮಲೆಯು ದೊಡ್ಡ ದನಿಯಿಂದ—ಅವ್ವಾ! ಅವ್ವಾ!! ಎಂದು ನೆಲದ ಮೇಲೆ ಬಿದ್ದು ಹೊರಳಾಡಹತ್ತಿದಳು. ಅವಳ ಶೋಕವನ್ನು ನೋಡಿದರೆ ಎಂಥ ಕಠಿಣಹೃದಯುದವನ ಮನಸ್ಸಾದರೂ ಕರಗುವಂತೆ ಇತ್ತು. ಭುಜಂಗರಾಯನ ಅಪ್ಪಣೆಯ ಮೇರೆಗೆ ಎಲ್ಲರೂ ಮುಂದಿನ ಸಿದ್ಧತೆಯಲ್ಲಿ ತೊಡಗಿದರು.

## [೧೧]

ಬಳವಂತರಾಯನ ಮನೆಯಲ್ಲಿ ಈ ಪ್ರಕಾರ ಹೃದಯದ್ರಾವಕವಾದ ರೋದನವು ನಡೆದ ವೇಳೆಯಲ್ಲಿ ಗೋವಿಂದರಾಯನ ತೋಟದೊಳಗಿನ ಮಹಲಿನಲ್ಲಿ ಭಯಂಕರವಾದ ದುಷ್ಟಾಲೋಚನೆಯು ನಡೆದಿತ್ತು.

ಮೀನಾಕ್ಷಿಯು ತಮ್ಮ ಅತ್ತೆಯ ಮನೆಯಲ್ಲಿಯೇ ಕುಳಿತು, ಬಳವಂತರಾಯನ ಮನೆಯೊಳಗೆ ಅಳುವದನ್ನು ಕೇಳಿದಳು. ಆಗ ಅವಳು ಕಮಲೆಯ ತಾಯಿಯು ಮರಣ ಹೊಂದಿದಳೆಂದು ಖಾತ್ರಿಮಾಡಿಕೊಂಡು ಗೋವಿಂದರಾಯನ ತೋಟದ ದಾರೀ ಹಿಡಿದಳು.

ಚಕ್ಕಡಿಯ ದಾರಿಯನ್ನು ಹಿಡಿದರೆ, ದಾರಿಯು ಸುತ್ತು ಆಗಿ ಬಹಳ ವೇಳೆ ಹತ್ತುತ್ತದೆಂದು ತಿಳಿದು ಆ ನೀಚಳು ಕಾಲುದಾರೀ ಹಿಡಿದು ವೇಗವಾಗಿ ನಡೆಯಹತ್ತಿದಳು. ಅವಳು ತೋಟಕ್ಕೆ ಹೋಗಿ ನೆಟ್ಟಗೆ ಗೋವಿಂದರಾಯನ ಕೋಣೆಗೆ ಹೋದಳು. ಗೋವಿಂದರಾಯನೂ, ರುದ್ರಪ್ಪನೂ ಯಾವದೋ ಒಂದು ವಿಷಯವಾಗಿ ಮಾತಾಡುತ್ತ ಕುಳಿತಿದ್ದರು. ಮೀನಾಕ್ಷಿಯು ತೇಕುತ್ತ ಹೋಗಿ— "ಹುಜೂರ, ಎಲ್ಲವೂ ಸಮಾಪ್ತಿಯಾಯಿತು," ಎಂದಳು.

ಗೋವಿಂದರಾಯನು ಆಶ್ಚರ್ಯದಿಂದ—ಏನಂದೀ? ಎಂದು ಕೇಳಿದನು.

ಮೀನಾಕ್ಷೀ—ತಮ್ಮ ಎದುರಿಗೆ ನಾನು ಎಂದಾದರೂ ಸುಳ್ಳು ಆಡುವೆನೇನು? ನನ್ನ ಮಾತನ್ನು ಸಮಾಧಾನದಿಂದ ಕೇಳಿರಿ.

ಗೋವಿಂದ—ಅದೇನು ಹೇಳು.

ಮೀನಾಕ್ಷಿ—ಕಮಲೆಯ ತಾಯಿಯು ಈಗ ಸತ್ತಳು. ಇಂದಿನ ಈ ರಾತ್ರಿಯು ನಿಮ್ಮ ಕೆಲಸ ಸಾಧಿಸಿಕೊಳ್ಳಲಿಕ್ಕೆ ಬಹಳ ಅನುಕೂಲವಾಗಿದೆ.

ಗೋವಿಂದರಾಯನು ಸನ್ಮಾರ್ಗಭ್ರಷ್ಟನಾದರೂ ಪಿಶಾಚಿಯಲ್ಲ. ಅವನು--ಬೇಡ! ಬೇಡ! ಇಂಥ ಹೀನ ಕೆಲಸಕ್ಕೆ ನನ್ನ ಮನಸ್ಸು ಒಪ್ಪದು. ಇಂಥ ಕಠಿಣ ಮನಸ್ಸು ಎಂಥ ಮನುಷ್ಯನಿಗೂ ಹುಟ್ಟದು.

ಮೀನಾಕ್ಷಿಯು ಕೃತ್ರಿಮ ಸಿಟ್ಟಿನಿಂದ—ಹಾಗಾದರೆ ಆ ಹವ್ಯಾಸವನ್ನೇ ಬಿಡಿರಿ; ನಾನು ಹೋಗುತ್ತೇನೆ.

ಗೋವಿಂದ—ಮೀನಾಕ್ಷಿ, ನಿಜವಾಗಿಯೂ ನೀನು ಪಿಶಾಚಿಯು.

ಮೀನಾಕ್ಷಿಯು ಅಧೈರ್ಯಪಡದೆ—ಹೌದು, ನೀವನ್ನುವದು ನಿಜವು; ಆದರೆ ಈ ವಿಷಯದಲ್ಲಿ ನಾನು ಮುಂದಾಗಿದ್ದಿಲ್ಲ. ನೀವೇ ಜುಲುಮೆಯಿಂದ ನನ್ನನ್ನು ಈ ನೀಚ ಕೆಲಸಕ್ಕೆ ಪ್ರವೃತ್ತ ಮಾಡಿಸಿದಿರಿ.

ಗೋವಿಂದರಾಯನು ಒಂದು ಗ್ಲಾಸು ಬ್ರ್ಯಾಂಡಿಯನ್ನು ಕುಡಿದನು. ಅದರಿಂದ ಅವನಹೃದಯದಲ್ಲಿ ಬಲಬಂತು. ವಿವೇಕಶಕ್ತಿಯು ಮಾತ್ರಕಡಿಮೆಯಾಯಿತು.

ಮೀನಾಕ್ಷಿಯು ಗೋವಿಂದರಾಯನನ್ನು ಕುರಿತು—ಈಗ ಸುಯೋಗ ಒದಗಿದೆ. ರಾಮಪುರದಿಂದ ಸ್ಮಶಾನಭೂಮಿಯು ದೂರವಿದೆ. ಅವರು ಅಲ್ಲಿಗೆ ಹೋಗಲಿಕ್ಕೆ ಇನ್ನೂ ಎರಡುತಾಸು ಬೇಕು. ನಿಮಗೆ ಗದ್ದಲವಾಗದೆ ಕಾರ್ಯ ಸಾಧಿಸಿಕೊಳ್ಳುವ ಮನಸ್ಸಿದ್ದರೆ ಧರ್ಮಾಧರ್ಮ ಪಾಪ-ಪುಣ್ಯಗಳ ವಿಚಾರಬೇಡ. ಈಲೋಕದ ಸುಖವು ಬೇಕಾದರೆ, ಪರಲೋಕದ ಸುಖದ ವಿಚಾರಬೇಡ. ಇಂದಿನದಿವಸ ಹೇಗೆ ಮಾಡಿದರೆ ಕೆಲಸವಾಗುವದೋ ಅದರಂತೆ ಮಾಡುವ ಯತ್ನಮಾಡಿರಿ, ಅವಳಿಗೆ ಈಗ ಯಾರೂಗತಿಯಿಲ್ಲ. ಗಂಡನಂತೂ ಬಿಟ್ಟಿರುವನು. ಈ ವೇಳೆಯಲ್ಲಿ ನೀವು ಸುಮ್ಮನೆ ಕುಳಿತರೆ ಭುಜಂಗರಾಯನು ನಿರಾಶ್ರಿತಳೆಂದು ಅವಳನ್ನು ಅಪಹರಿಸುವನು.

ಗೋವಿಂದರಾಯನು ಮತ್ತೊಮ್ಮೆ ಬ್ರ್ಯಾಂಡಿ ಕುಡಿದನು. ಕೆಲಹೊತ್ತು ಮನಸ್ಸಿನಲ್ಲಿ ಏನೋ ಯೋಚಿಸಿ—ಇಲ್ಲ; ಇಲ್ಲ; ಹಾಗೆಂದಿಗೂ ಆಗುವಂತೆ ಇಲ್ಲ,

ನಾನು ಜೀವಂತ ಇರುವವರೆಗೆ ಅವಳನ್ನು ಎಂದಿಗೂ ಭುಜಂಗರಾಯನ ಕೈವಶವಾಗಗೊಡುವದಿಲ್ಲ,

ಮೀನಾಕ್ಷಿ—ಹಾಗಾದರೆ ಮುಂದಿನ ವ್ಯವಸ್ಥೆ ಮಾಡಿರಿ.

ಗೋವಿಂದ—ನೀನೇ ಹೇಳು, ಏನು ಮಾಡಬೇಕು.

ಮೀನಾಕ್ಷಿ—೮-೧೦ ಜನ ಲಮಾಣಿಯರು ಮತ್ತು ಈ ರುದ್ರಪ್ಪನು ಇಷ್ಟು ಮಂದಿಯಾದರೆ ತೀರಿತು. ಕೆಲಸವಾಗುವದು. ಅವಳನ್ನು ಸ್ಮಶಾನ ಭೂಮಿಯಿಂದಾಗಲೀ, ಮನೆಯಿಂದಾಗಲೀ ಇಂದಿನ ರಾತ್ರಿಯೇ ಅಪಹರಿಸಿಕೊಂಡು ನಿಮ್ಮ ಎರಡನೇ ಗ್ರಾಮದಲ್ಲಿ ಗುಪ್ತವಾಗಿಡಬೇಕು.

ಗೋವಿಂದರಾಯ—ಛೀ! ಛೀ!! ಇಂಥ ನೀಚ ಕೆಲಸವು ನನ್ನಿಂದ ಆಗದು. ಇದು ಬಹಳ ಭಯಂಕರ ಕೆಲಸ. ಅಲ್ಲಿ ಭುಜಂಗರಾಯನ ಜನರೂ ಇರುವರು. ಏನಾದರೂ ವಿಪರೀತ ಪ್ರಸಂಗ ಒದಗಬಹುದು.

ಮೀನಾಕ್ಷಿ—ಏನು! ಭುಜಂಗರಾಯರೊಬ್ಬರೇ ದೇಸಾಯರೇನು. ನೀವು ಅಲ್ಲವೇನು? ನಿಮಗೇನು ಜನರಿಲ್ಲವೇ! ಹಣವಿಲ್ಲವೇ?

ಗೋವಿಂದರಾಯನು ನಿಟ್ಟುಸುರು ಬಿಟ್ಟು—ಮೀನಾಕ್ಷೀ, ರಾಕ್ಷಸೀ, ನೀನು ಇಲ್ಲಿಂದ ಹೊರಟು ಹೋಗು. ನಾನು ಭ್ರಮೆಯಿಂದ ಪಾಪಕರ್ಮಕ್ಕೆ ಸಂಕಲ್ಪ ಮಾಡಿದ್ದು ನಿಜವು; ಆದರೆ ನೀನು ನನ್ನನ್ನು ನರಕದ ಮಾರ್ಗದಲ್ಲಿ ಮುಂದೆ ನೂಕುತ್ತೀ. ನಾನು ಶಿರೆಗುಡಕನು, ವಿಷಯಾಸಕ್ತನು; ಆದರೆ ಕುಲಸ್ತ್ರೀಯ ಸರ್ವನಾಶವನ್ನು ಮಾಡುವದಿಲ್ಲ.

ಮೀನಾಕ್ಷಿಯು ತಿರಸ್ಕಾರದಿಂದ—ಓಹೋ, ಅವಳು ಬಹಳಪತಿವ್ರತೆಯು; ಆದ್ದರಿಂದಲೇ ಅವಳನ್ನು ಗಂಡನು ಬಿಟ್ಟಿರುವನು. ಅದೆಲ್ಲ ಕಾರಭಾರ ನನಗೇಕೆ? ನಿಮ್ಮ ಇಚ್ಛೆಯ ಪ್ರಕಾರ ವರ್ತಿಸಿರಿ. ನಾನು ಹೋಗುತ್ತೇನೆ, ಎಂದು ಹೊರಟಳು.

ಆಗ ಗೋವಿಂದರಾಯನು—ಮೀನಾಕ್ಷೀ, ನಿಲ್ಲು. ನಿಲ್ಲು. ಹೋಗಬೇಡ. ಎಂದು ಒದರಿದನು. ಕೂಡಲೆ ಅವಳು ಮತ್ತೆ ಕೋಣೆಯಲ್ಲಿ ಬಂದಳು.

ಗೋವಿಂದರಾಯನು ಕೋಣೆಯ ಮುಂದಿನ ಛಾವಣಿಗೆ ಬಂದನು. ಅವನ ಹೃದಯಮಧ್ಯದಲ್ಲಿ ನೆಲೆಗೊಂಡ ಕಮಲೆಯ ರೂಪವು ಮತ್ತೆ ಅವನ ಕಣ್ಣೆದುರಿಗೆ ಕಟ್ಟಿದಂತಾಯಿತು. ಅವನು ರೂಪಮೋಹಿತನಾಗಿ ಆತ್ಮ ವಿಸ್ಮೃತಿ ಹೊಂದಿದನು. ಕಡೆಗೆ ಗೋವಿಂದರಾಯನು ಚಂಚಲ ಮನಸ್ಸಿನಿಂದ ಕೋಣೆಯಲ್ಲಿ ಬಂದು ಕರ್ಕಶಸ್ವರದಿಂದ—ರುದ್ರಪ್ಪ, ಎಂದನು.

ರುದ್ರಪ್ಪನು ಒತ್ತಟ್ಟಿಗೆ ನಿಂತುಕೊಂಡು ಮನಸ್ಸಿನಲ್ಲಿಯೇ ಅನೇಕತರದ ವಿಚಾರಮಾಡಹತ್ತಿದನು. ಒಮ್ಮೆ ಅವನು ಮನಸ್ಸಿನಲ್ಲಿ ನಮ್ಮ ಈ ಸ್ವರ್ಣ ಗಾರ್ದಭನಂತಿರುವ ಯಜಮಾನನು ನನ್ನ ಅಪರೋಕ್ಷ ನನಗೆ ಸೈತಾನನೆಂದು ಅನ್ನುವನು; ಆದರೆ ಒಳಗಿಂದೊಳಗೇ ಇಂಥ ಭಯಂಕರ ಕಾರಸ್ಥಾನವನ್ನು ನಡಿಸಿರುವನು. ನಾನು ಎಷ್ಟೋ ಜನರನ್ನು ನೋಡಿರುವೆನು; ಆದರೆ ನಿರಾಶ್ರಿತ ದುಃಖಪೀಡಿತ ಕುಲಕಾಮಿನಿಯ ಸರ್ವನಾಶ ಮಾಡುವ ಇಂಥ ಹೆಚ್ಚಿನ ನೀಚರನ್ನು ನೋಡಿಲ್ಲ. ಛೀ! ಛೀ!! ಇಂಥವನ ಮೋರೆ ಸಹ ನೋಡಬಾರದು. ನೋಡಿರಿ, ಇವರು ಬಹಳ ಸುಶಿಕ್ಷಿತರು.

ಮತ್ತೆ ಅವನು ಮನಸ್ಸಿನಲ್ಲಿ—ದುಡ್ಡಿನ ಸಲುವಾಗಿ, ಹೊಟ್ಟೆಯ ಸಲುವಾಗಿ ನಾನು ಇಂಥವನ ಚಾಕರಿ ಮಾಡಹತ್ತಿರುವೆನು. ಏನಾದರೂ ಇಂಥ ಫೌಜದಾರೀ ನ್ಯಾಯಗಳುಂಟಾದರೆ ಸೈ. ಇಲ್ಲವಿದ್ದರೆ ಹತ್ತು-ಹನ್ನೆರಡು ರೂಪಾಯಿಗಳಿಂದ ನಮ್ಮ ಉಪಜೀವನ ಹೇಗೆ ಸಾಗಬೇಕು? ಹೇಗೂ ಅವಳಿಗೆ ಭುಜಂಗರಾಯನ ಸಹಾಯವದೆ. ಅಂದಮೇಲೆ ಪ್ರಕರ್ಣವು ಏಕೋಪಕ್ಕೆ ಒಂದೇ ಬರುವದು, ಇದರಿಂದ ನನಗೆ ಎರಡೂ ಕಿಸೆ ತುಂಬಿಕೊಳ್ಳಲಿಕ್ಕೆ ಅನುಕೂಲವಾಗುವದು. ಈ ಎಲ್ಲ ಕೆಲಸದ ಪಾಪವು ಯಜಮಾನನಿಗೆ. ನಾವು ನೌಕರರು, ನಮಗೇನೂ ಪಾಪವಿಲ್ಲ. ನಾವೇನು ಸ್ವತಃ ಪಾಪದ ಇಚ್ಛೆಯವರಲ್ಲ. ಒಡೆಯನ ಅಪ್ಪಣೆಯಂತೆ ನಡೆಯತಕ್ಕ ಸೇವಕರು. ಇದಲ್ಲದೆ ಒಂದೇ ಕಾರ್ಯದಿಂದ ಎರಡೂ ಕೆಲಸಗಳು ಆಗುವವು. ಹಿಂದಕ್ಕೆ ನನ್ನ ನೌಕರಿಯು ಹೋಗಲಿಕ್ಕೆ ಬಳವಂತರಾಯನೇ ಕಾರಣನಾದನು. ಈಗ ನನ್ನ ಹಿಂದಿನ ಸೇಡು ಪೂರಾ ತೀರಿಸಿಕೊಳ್ಳಲಿಕ್ಕೆ ಯೋಗ್ಯ ಸಮಯವದೆ. ಹೀಗೆ ವಿಚಾರಮಗ್ನನಾಗಿದ್ದನು. ಅದೇ ವೇಳೆಯಲ್ಲಿ ಗೋವಿಂದರಾಯನು ಕೋಣೆಯಲ್ಲಿ ಬಂದು ರುದ್ರಪ್ಪಾ, ಎಂದು ಒದರಿದ ಕೂಡಲೆ ಒಮ್ಮಿಂದೊಮ್ಮೆಲೆ ಎಚ್ಚತ್ತು—ಸರಕಾರ, ಏನಪ್ಪಣೆ?

ಗೋವಿಂದ—ಮೀನಾಕ್ಷಿಯು ಹೇಳಿದ ಮಾತು ಕೇಳಿದೆಯೋ?

ರುದ್ರಪ್ಪ—ಕೇಳಿದೆನು.

ಗೋವಿಂದ—ಈಗ ಎಷ್ಟು ಜನ ವಿಶ್ವಾಸಿಕ ಲಮಾಣಿಗಳು ಸಿಗುವರು?

ರುದ್ರಪ್ಪ—ಎಂಟು-ಹತ್ತು ಜನ ಸಿಗಬಹುದು.

ಗೋವಿಂದ—ಅವರನ್ನು ಕರೆದುಕೊಂಡು ಕೆಲಸ ಮಾಡುವಿಯಾ?

ರುದ್ರಪ್ಪ—ತಮ್ಮ ಆಶೀರ್ವಾದವೊಂದಿದ್ದರೆ ನನಗೆ ಅಸಾಧ್ಯವಾದ ಕೆಲಸವು ಯಾವದೂ ಇಲ್ಲ.

ಗೋವಿಂದ—ಕೆಲಸವನ್ನು ಬಹಳ ಹುಷಾರಿಯಿಂದ ಮಾಡಬೇಕು. ಕೆಲಸವು ಸಿದ್ಧಿಯಾದರೆ ನಿನಗೆ ಇನಾಮು ಕೊಡುವೆನು. ಏನಾದರೂ ತಪ್ಪಿನಿಂದ ಕೆಲಸವನ್ನು ಕೆಡಿಸಿದರೆ ನಾನು ಈ ಪೇಚಿನಿಂದ ತಪ್ಪಿಸಿಕೊಂಡು ಬಿಡುವೆನು. ವಿರುದ್ಧ ಪಕ್ಷದ ಭುಜಂಗರಾಯನು ಎಂಥವನೆಂಬದು ನಿನಗೆ ಗೊತ್ತೇ ಅದೆ. ಅದು ಜಬರಿ ಫೌಜದಾರಿಯಾದರೆ ಅದರ ತಪ್ಪೆಲ್ಲ ನಿನ್ನ ತಲೆಯ ಮೇಲೇ.

ರುದ್ರಪ್ಪ—ತಮ್ಮ ಹುಕುಮಿನ ಪ್ರಕಾರ ಆ ಎಲ್ಲ ಜಬಾಬುದಾರಿಯನ್ನು ಹೊರಲಿಕ್ಕೆ ಸಹ ನನ್ನ ಒಪ್ಪಿಗೆ ಅದೆ.

ಗೋವಿಂದರಾಯನು ಟ್ರೇಝರಿ ತೆಗೆದು ಅದರಲ್ಲಿಯ ಒಂದು ನೋಟಿನ ಬಂಡಲ್ ತೆಗೆದು ಹತ್ತು-ಹತ್ತು ರೂಪಾಯಿಯ ೨೦ನೋಟುಗಳನ್ನು ರುದ್ರಪ್ಪನ ಕೈಯಲ್ಲಿ ಕೊಟ್ಟು--ನಾನು ಇಂದಿನ ರಾತ್ರಿಯೇ ಈ ಸ್ಥಳ ಬಿಡುವೆನು. ಈ ರೂಪಾಯಿಗಳು ನಿನ್ನ ಹತ್ತರವೇ ಇರಲಿ. ಕೆಲಸವು ಸಾಧ್ಯವಾದರೆ ಮೀನಾಕ್ಷಿಗೆ ೫೦ ರೂಪಾಯಿಗಳನ್ನು ಕೊಡು; ಮತ್ತು ಈ ಔಷಧದ ಬಾಟ್ಲಿ, ಈ ಕರವಸ್ತ್ರವನ್ನು ತೆಗೆದುಕೋ. ಔಷಧದ ಒಂದು ಹನಿ ಈ ವಸ್ತ್ರದ ಮೇಲೆ ಹಾಕಿ ವಾಸನೆ ತೋರಿಸಿದರೆ ೩-೪ ತಾಸು ಪ್ರಜ್ಞೆ ತಪ್ಪುವದು. ಅವಳನ್ನು ಭೈರಾಪುರದ ತೋಟದಲ್ಲಿಯ ಮನೆಗೆ ಹೊತ್ತುಕೊಂಡು ಬರ್ರಿ; ಮತ್ತು ನಾನು ಅಲ್ಲಿಗೆ ಬರುವವರೆಗೆ ನೀವು ಅಲ್ಲಿಯೇ ಇರ್ರಿ.

ರುದ್ರಪ್ಪನು ನೋಟುಗಳನ್ನೂ ಔಷಧದ ಬಾಟ್ಲಿ, ವಸ್ತ್ರವನ್ನೂ ಕಿಸೆಯಲ್ಲಿ ಭದ್ರವಾಗಿಟ್ಟುಕೊಂಡು, ಮೀನಾಕ್ಷಿಯನ್ನು ಕುರಿತು—ನಡೆ, ನಾವೂ ಹೋಗೋಣ; ಮುಂದಿನ ಕೆಲಸಕ್ಕೆ ಹತ್ತೋಣ.

ರುದ್ರಪ್ಪನೂ ಮೀನಾಕ್ಷಿಯೂ ಹೊರಟು ಹೋದರು. ಗೋವಿಂದರಾಯನು ಅಲ್ಲಿಂದ ಅಂದಿನ ರಾತ್ರಿಯೇ ಹೊರಟನು. ಹೊರಡುವಾಗ ಅಲ್ಲಿಯ ಕಾರಕೂನನಾದ ಭೀಮರಾಯನನ್ನು ಕುರಿತು—ಯಾರು ಬಂದು ಕೇಳಿದರೂ ನಾನು ಗದಗಿಗೆ ಹೋಗಿರುವೆನೆಂದು ಹೇಳು. ನಿನಗೆ ಮುಖ್ಯವಾಗಿ ಹೇಳುವದೇನಂದರೆ ನಾನು ಭೈರಾಪುರದ ತೋಟದಲ್ಲಿ ಇರುವೆನು. (ಈ ತೋಟದಿಂದ ಭೈರಾಪುರದ ತೋಟವು ಎಂಟು ಹತ್ತು ಮೈಲು ಆಗುತ್ತಿತ್ತು.)

# [೧೨]

ಕಮಲೆಗೆ ಬಸವಂತನ ಹೊರತು ಮತ್ತಾರೂ ಸಹಾಯಕರಿದ್ದಿಲ್ಲ. ಆದರೂ ಭುಜಂಗರಾಯನ ಅಪ್ಪಣೆಯಮೇರೆಗೆ ಶ್ರೀನಿವಾಸ ದೀಕ್ಷಿತರೂ, ರಾಮಾಚಾರ್ಯರೂ, ಮತ್ತೆ ನಾಲ್ಕಾರು ಜನ ಬ್ರಾಹ್ಮಣರೂ ಬಂದರು. ಉಳಿದ ವ್ಯವಸ್ಥೆಯಾದರೂ ಚನ್ನಾಗಿ ಮಾಡಲ್ಪಟ್ಟಿತ್ತು. ಗಂಗಾಬಾಯಿಯ ಪ್ರೇತವು ವಿಶೇಷ ತೊಂದರೆಯಿಲ್ಲದೆ ಸ್ಮಶಾನ ಭೂಮಿಗೆ ಬಂತು. ಎಷ್ಟು ಹೇಳಿದರೂ ಕೇಳದೆ, ಕಮಲೆಯು ತಾಯಿಯ ಪ್ರೇತದ ಸಂಗಡ ಸ್ಮಶಾನಕ್ಕೆ ಹೊರಟಳು.

ಸೂರ್ಯಾಸ್ತವಾದಾಗಿನಿಂದ ಆಕಾಶದಲ್ಲಿ ಮೋಡವು ಹೆಚ್ಚಾಗಿ ವ್ಯಾಪಿಸ ಹತ್ತಿತ್ತು. ನಡುನಡುವೆ ಗಾಳಿಯೂ ಜೋರಿನಿಂದ ಬೀಸುತ್ತಿತ್ತು. ಮಧ್ಯರಾತ್ರಿಯ ಸುಮಾರಕ್ಕೆ ಮೋಡ ಮುಸುಕಿ, ಎಲ್ಲ ಕಡೆಗೂ ಕಗ್ಗತ್ತಲೆ ಕವಿದಿತ್ತು. ಈ ವೇಳೆಯಲ್ಲಿ ಗಾಳಿಯ 'ಭರ್ರ' ಎಂಬ ಸಪ್ಪಳದಿಂದ ರಾಮಪುರದ ಸ್ಮಶಾನದಲ್ಲಿಯ ಚಿತೆಯ ಜ್ವಾಲೆಗಳು ನಾಲ್ಕೂಕಡೆಗೆ ಪಸರಿಸಿ, ಸುತ್ತಲಿನ ಗಾಢಾಂಧಕಾರದ ಶಕ್ತಿಯನ್ನು ಕಡಿಮೆ ಮಾಡಿದ್ದವು.

ಕಮಲೆಯು ಸ್ಥಿರ ಮನಸ್ಸಿನಿಂದ ಆ ಉರಿಯುವ ಚಿತೆಯಕಡೆಗೆ ಏಕಾಗ್ರ ದೃಷ್ಟಿಯಿಂದ ನೋಡಹತ್ತಿದಳು. ಅವಳ ದೃಷ್ಟಿಯು ಉದಾಸೀನತೆಯಿಂದ ಕೂಡಿತ್ತು. ಈ ಜಗತ್ತಿನಲ್ಲಿ ತನ್ನದೆಂದು ಪೂರ್ಣವಾಗಿ ನಂಬಿದ ವಸ್ತುವು ಆ ಉರಿಯುವ ಚಿತೆಯ ಮಧ್ಯದಲ್ಲಿಯೇ ಇತ್ತು. ಮೇದ-ಮಾಂಸಮಯ ದೇಹವು ಕ್ಷಣ ಕ್ಷಣಕ್ಕೆ ಭಸ್ಮೀಭೂತವಾಗಿ ಹೊಗೆಯ ಸಂಗಡ ಹವೆಯಲ್ಲಿ ಕೂಡಹತ್ತಿತು. ಯಾವ ದೇಹದ ಹೃದಯಮಧ್ಯದಲ್ಲಿ ಅವಳ ಸಲುವಾಗಿ ದಯಾ, ಮಾಯಾ, ಕರುಣಾ, ಸ್ನೇಹಗಳು ನಿಜವಾಗಿಯೂ ಮೂರ್ತಿಮಂತವಾಗಿ ನೆಲಸಿದ್ದವೋ, ಆ ದೇಹವು ದೇವರ ವಿಚಿತ್ರಲೀಲೆಯಿಂದ ಕ್ರಮವಾಗಿ ಭಸ್ಮವಾಗಹತ್ತಿತು. ಎಲ್ಲರಿಗೂ ಹುಟ್ಟುವಂತೆ ಅವಳಿಗೂ ಸ್ಮಶಾನ ವೈರಾಗ್ಯವು ಹುಟ್ಟಿತು. ಅದು ಅವಳ ಹೃದಯವನ್ನು ಕಠಿಣವಾಗಮಾಡಿತು. ಮತ್ತೆ ಅವಳು ಆ ಚಿತೆಯ ಕಡೆಗೆ ನೋಡಿದಳು. ವೈಶ್ವಾನರನು ಅವಳ ತಾಯಿಯನ್ನು ಸಂಪೂರ್ಣವಾಗಿ ನುಂಗಿಬಿಟ್ಟಿದ್ದನು. ಆಗ ಒಂದು ಕ್ಷಣ ಕಾಲದವರೆಗೆ ಆ ವೈರಾಗ್ಯವು ಇಲ್ಲದಾಯಿತು. ಕೂಡಲೇ ಅವಳು ಗಟ್ಟಿಯಾಗಿ ದೀನಭಾವದಿಂದ—ಅವ್ವಾ! ಅವ್ವಾ!! ಎಂದು ಚೀರಿದಳು. ಅವಳ ಕಾತರ

ಧ್ವನಿಯು ಆಕಾಶದ ವರೆಗೆ ವ್ಯಾಪಿಸಿತು. ಎಲ್ಲಿಂದಲೋ ಒಂದು ಪ್ರತಿಧ್ವನಿಯು ಅವಳ ಕಿವಿಗೆ ಬಿತ್ತು. "ಅಳು! ಅಳು!! ಕಮಲೇ ಅಳು!!! ಬೇಕಾದಷ್ಟು ಅಳು; ಸಾಯುವವರೆಗೆ ಹೀಗೆ ಅಳು. ಕಡೆಗೆ ಒಂದು ದಿವಸ ಇದೇ ಪ್ರಕಾರ ನಿನ್ನ ದೇಹದ ಪರಿಸಮಾಪ್ತಿಯೂ ಇದೇ ಸ್ಮಶಾನದಲ್ಲಿ ಆಗುವದು."

ಶವವು ಪೂರ್ಣವಾಗಿ ಸುಟ್ಟದ್ದನ್ನು ಕಂಡು ಶ್ರೀನಿವಾಸದೀಕ್ಷಿತನು—ತಂಗೀ, ಎಲ್ಲರ ಸ್ಥಿತಿಯೂ ಕಡೆಗೆ ಹೀಗೇ ಆಗುವದು. ಜೀವವು ದೇಹದಲ್ಲಿ ಇರುವತನಕ ಮನುಷ್ಯನು; ಜೀವವು ಹೋದಕೂಡಲೆ ಮನುಷ್ಯನೂ ಮಣ್ಣೂ ಒಂದೇ; ಇನ್ನು ನೀನು ಶೋಕಮಾಡಿ ಮಾಡುವದಾದರೂ ಏನು? ಮೋಡವು ಬಹಳವಾಗಿದೆ; ಮತ್ತು ನಡುನಡುವೆ ಮಿಂಚಹತ್ತಿದೆ. ಇನ್ನು ಸ್ವಲ್ಪ ಹೊತ್ತಿನಲ್ಲಿ ಮಳೆ ಬರುವ ಲಕ್ಷಣ ಕಾಣುತ್ತದೆ. ನಾವು ಇಲ್ಲೇ ಕುಳಿತಿರುತ್ತೇವೆ, ನೀನು ಆ ಹಳ್ಳದಲ್ಲಿ ಸ್ನಾನಮಾಡಿ ಈ ಗಡಿಗೆಯಲ್ಲಿ ನೀರು ತೆಗೆದುಕೊಂಡು ಬಾ.

ಕಮಲೆಯು ಏನೂ ಉತ್ತರ ಕೊಡಲಿಲ್ಲ. ಆಗ ಬಸವಂತನು—ಅಕ್ಕಾ, ಇನ್ನು ಚಿಂತೆಮಾಡಿದರೆ ಆಗುವದೇನು? ಎಂದನು.

ಕಮಲೆಯು ಉಸುರ್ಗರೆದು—ಬಸವಂತಾ, ನನ್ನದೆಂಬದು ಈ ಜಗತ್ತಿನಲ್ಲಿ ಏನೂ ಇಲ್ಲ. ಇನ್ನು ನನಗೆಲ್ಲಿ ಆಶ್ರಯವದೆ? ಎಂದು ಕೇಳಿದನು.

ಬಸವಂತನು ಗಂಭೀರಭಾವದಿಂದ—ದೇವರ ಈ ವಿಶಾಲವಾದ ಜಗತ್ತಿನಲ್ಲಿ ಕೋಟ್ಯನುಕೋಟಿ ಕೀಟಕ, ಪತಂಗ, ಸ್ಥಾವರ, ಜಂಗಮ ಪದಾರ್ಥಗಳಿಗೆ ಆಶ್ರಯವಿದ್ದು, ನಿನಗೊಬ್ಬಳಿಗೆ ಇರಲಿಕ್ಕಿಲ್ಲವೇನು? ಹಾಗೆ ಎಂದಿಗೂ ಆಗದು. ನಿನ್ನ ಹತಭಾಗ್ಯ ತಮ್ಮನಾದ ನಾನು ಜೀವಂತನಿರುವೆನು. ಇರಲಿಕ್ಕೆ ನಿಮ್ಮ ತಂದೆಯ ಮನೆಯೂ ಅದೆ. ನಾನು ನಟ್ಟು ಕಡಿದಾದರೂ ನಿನ್ನ ಹೊಟ್ಟೆಗೆ ಹಾಕುವೆನು. ಅದಕ್ಕೇಕೆ ಚಿಂತೆಮಾಡುವಿ?

ಇಷ್ಟರಲ್ಲಿ ಕೋಲುಮಿಂಚು ಮಿಂಚಿತು. ಗಾಳಿಯೂ ಜೋರಾಯಿತು. ಒಂದೆರಡು ಹನಿಗಳು ಕೂಡ ಉದುರಿದವು. ಇನ್ನು ಮಳೆ ಬರುವದೆಂದು ತಿಳಿದು ಶ್ರೀನಿವಾಸ ದೀಕ್ಷಿತನು ಗಟ್ಟಿಯಾಗಿ—ಬಸವಂತಾ, ನೀನು ಕಮಲಾಬಾಯಿಯನ್ನು ಸಂಗಡ ಕರಕೊಂಡು ಹೋಗು; ಮತ್ತು ಆ ಗಡಿಗೆಯಲ್ಲಿ ನೀರು ತರಲಿಕ್ಕೆ ಹೇಳು. ಮಳೆ ಬರಲಿಕ್ಕೆ ಹತ್ತಿತು. ಕಾಣುವದಿಲ್ಲೇನು?

ಬಸವಂತನು ಕಮಲೆಯನ್ನು ಕುರಿತು—ಅಕ್ಕಾ ಇನ್ನು ತಡಮಾಡಬೇಡ, ನಡೆ, ನಾನೂ ಸಂಗಡ ಬರುತ್ತೇನೆ, ಎಂದನು.

ಇಬ್ಬರೂ ಕೂಡಿ ಆ ಅಂಧಃಕಾರವನ್ನು ಭೇದಿಸಿ ಹಳ್ಳದ ದಾರೀ ಹಿಡಿದರು. ಸ್ಮಶಾನಭೂಮಿಯಿಂದ ಎರಡು ಹೊಲ ದಾಟಿದ ಕೂಡಲೆ ಹಳ್ಳವಿತ್ತು; ಮತ್ತು ಆ ಹಳ್ಳದ ದಂಡೆಯ ಮೇಲೆ ದೊಡ್ಡದೊಂದು ಆಲದ ಮರವಿತ್ತು.

ಆಗ ಬಸವಂತನು—ಅಕ್ಕಾ, ನಾನು ಕಂದೀಲು ಹಿಡಕೊಂಡು ಇಲ್ಲಿಯೇ ಗಿಡದ ಬುಡದಲ್ಲಿ ನಿಲ್ಲುತ್ತೇನೆ. ನೀನು ನೀರು ತುಂಬಿಕೊಂಡು ಬಾ, ಎಂದನು. ಆ ಗಿಡದಿಂದ ನೀರು ಬಹಳ ದೂರವಿದ್ದಿಲ್ಲ. ೫-೬ ಮಾರು ದೂರ ಆಗುತ್ತಿತ್ತು. ಕಮಲೆಯು ಹಳ್ಳದಲ್ಲಿ ನೀರು ತುಂಬ ಹತ್ತಿದಳು. ಬಸವಂತನು ಆ ಕಡೆಗೆ ನೋಡುತ್ತ ಮೈಮರೆತು ನಿಂತಿದ್ದನು.

ಒಮ್ಮಿಂದೊಮ್ಮೆ ಯಾರೋ ಬಸವಂತನ ಹಿಂದೆ ಬಂದು ಆತನ ತಲೆಗೆ ಗುರಿ ನೋಡಿ, ಬಡಿಗೆಯಿಂದ ಹೊಡೆದರು. ಬಸವಂತನು ಚೀರಿ ನೆಲಕ್ಕೆ ಬಿದ್ದನು. ಗಾಳಿಯು ವಿರುದ್ಧ ದಿಕ್ಕಿಗೆ ಇದ್ದ ಕಾರಣ ಅವನು ಚೀರಿದ್ದು ಸ್ಮಶಾನದಲ್ಲಿದ್ದವರಿಗೆ ಕೇಳಿಸಲಿಲ್ಲ.

ಇದೇ ವೇಳೆಯಲ್ಲಿ ಕಮಲೆಯು ನಿಂತಲ್ಲಿ ಮತ್ತೊಂದು ಸಂಗತಿಯು ವರ್ತಿಸಿತು. ಹಳ್ಳದ ದಂಡೆಯಲ್ಲಿ ಕಂಬಳೀ ಹೊತ್ತುಕೊಂಡು ಕುಳಿತ ಇಬ್ಬರು ಕಮಲೆಯ ಹಿಂದಿನಿಂದ ಬಂದು ಒಂದು ವಸ್ತ್ರದಿಂದ ಅವಳ ಮೋರೆಯನ್ನು ಮುಚ್ಚಿದರು. ಆ ವಸ್ತ್ರವು ಔಷಧ ಮಿಶ್ರಿತವಾದ್ದರಿಂದ ಅವಳಿಗೆ ಚೀರುವದಕ್ಕೆ ಸಹ ಆಗಲಿಲ್ಲ. ಆ ಇಬ್ಬರು ಕಮಲೆಯನ್ನು ಹೊತ್ತುಕೊಂಡು ಆ ದಂಡೆಗೆ ಹೋಗಿ ಸಿಳ್ಳು ಹಾಕಿದರು. ಕೂಡಲೆ ಮೂರು-ನಾಲ್ಕು ಜನರು ಅಲ್ಲಿಗೆ ಬಂದರು.

ಹೊಸದಾಗಿ ಬಂದವರಲ್ಲೊಬ್ಬನು ಅಧಿಕಾರಸ್ವರದಿಂದ—ಇವಳನ್ನು ಹೊತ್ತುಕೊಂಡು ಬೇಗ ನಡೆಯಿರಿ. ಭೈರಾಪುರದ ದೊಡ್ಡ ಹಾದಿಗೆ ಮುಟ್ಟಬೇಕು. ಈ ಪ್ರಕಾರ ಆಜ್ಞೆ ಮಾಡಿದವನು ಮತ್ತೆ ಯಾರೂ ಅಲ್ಲ. ಸೈತಾನನಾದ ರುದ್ರಪ್ಪನು. ಯಾವ ನೀಚನೂ ಮಾಡದಂಥ ನೀಚ ಕೆಲಸವನ್ನು ರುದ್ರಪ್ಪನು ಕೇವಲ ಹಣದಾಶೆಯಿಂದ ಮಾಡಿದನು.

ಇತ್ತ ಸ್ಮಶಾನಭೂಮಿಯಲ್ಲಿದ್ದವರು ನೀರು ತೆಗೆದುಕೊಂಡು ಈಗ ಬರಬಹುದೆಂದು ಮಾರ್ಗ ನಿರೀಕ್ಷಣೆ ಮಾಡುತ್ತ ಕುಳಿತರು. ಮೋಡವು ಬರಬರುತ್ತ ಬಹಳವಾಗಹತ್ತಿತು. ನೀರಿಗೆ ಹೋದವರು ಬರಲಿಲ್ಲ. ಆಗ ದೀಕ್ಷಿತರು—ಗುಂಡಭಟ್ಟರೆ! ಹಳ್ಳದವರೆಗೆ ಹೋಗಿ ಬರುವಿರೇನು! ಬಸವಂತನೂ ಕಮಲಾಬಾಯಿಯೂ ಹೋಗಿ ಎಷ್ಟು ಹೊತ್ತಾಯಿತಲ್ಲ?

ಗುಂಡಭಟ್ಟರು ನೋಡಲಿಕ್ಕೆಂದು ಸ್ಮಶಾನಭೂಮಿಯ ಅಂತ್ಯಭಾಗಕ್ಕೆ ಬಂದರು. ಅಲ್ಲಿ ಕತ್ತಲದಲ್ಲಿ ಯಾರೋ ನಿಂತಂತೆ ಭಾಸವಾಯಿತು. ಆಗ ಗುಂಡಭಟ್ಟನಿಗೆ ಅಂಜಿಕೆ ಬಂತು. ಕತ್ತಲದಲ್ಲಿ ಆ ಮೂರ್ತಿಯು ನಿಶ್ಚಲವಾಗಿ ನಿಂತಿತ್ತು. ಅಷ್ಟರಲ್ಲಿ ಒಮ್ಮೆ ಮಿಂಚಿತು; ಆ ವ್ಯಕ್ತಿಯ ತಲೆಯ ಉದ್ದವಾದ ಕೂದಲುಗಳು ಹಾಗೇ ಬೆನ್ನು ಮೇಲೆ ಬಿದ್ದಿದ್ದವು. ಗಡ್ಡ-ಮೀಸೆಗಳಿಂದ ಮುಖವು ಭಯಂಕರವಾಗಿ ತೋರುತ್ತಿತ್ತು. ಆ ಮೂರ್ತಿಯು ಸ್ಥಿರಚಿತ್ತದಿಂದ ಚಿತೆಯ ಕಡೆಗೆ ನೋಡುತ್ತಿತ್ತು. ಕೂಡಲೆ ಅವನು ಭಯದಿಂದ—ಅಯ್ಯಯ್ಯಪ್ಪ! ಎಂದು ಒದರುತ್ತ, ಉಳಿದವರು ಕುಳಿತಲ್ಲಿಗೆ ಬಂದು—"ಓಡಿರೋ ಓಡಿರಿ!! ದೆವ್ವ!! ಬ್ರಹ್ಮರಾಕ್ಷಸ ಇಲ್ಲೇ ನಿಂತಿದೆ!!!

ಶ್ರೀನಿವಾಸ ದೀಕ್ಷಿತರು ಹೊರಳಿ ನೋಡಿದರು. ಗುಂಡಭಟ್ಟನು ಅಂಜಿ ನಡುಗ ಹತ್ತಿದ್ದನು. ಅವನೂ ಆ ಕಡೆಗೆ ನೋಡಿದನು. ಅದೇ ವೇಳೆಯಲ್ಲಿ ಮತ್ತೆ ಮಿಂಚಿತು. ಆಗ ಕಗ್ಗತ್ತಲೆಯಲ್ಲಿ ಒಂದು ದೀರ್ಘಕಾಯದ ಮೂರ್ತಿಯು ನಿಂತುಕೊಂಡು ಚಿತೆಯ ಕಡೆಗೆ ನೋಡುತ್ತಿದ್ದದ್ದು ಕಂಡಿತು. ಆಗ ಅವನಿಗೂ ಭಯ ಹುಟ್ಟಿತು; ಅವನು ಎಷ್ಟೋ ಸಾರೆ ಶವದಹನಕ್ಕೆ ಸ್ಮಶಾನಭೂಮಿಗೆ ರಾತ್ರಿ ಬಂದಿದ್ದನು; ಆದರೆ ಇಂಥ ಭಯಂಕರ ವ್ಯಾಪಾರವು ಅವನ ಕಣ್ಣಿಗೆ ಬಿದ್ದಿದ್ದಿಲ್ಲ. ಕಾರಣ ಅವನೂ ಗಾಬರಿಯಾಗಿ ಉಳಿದವರನ್ನು ಕುರಿತು—ಮಳೆಯು ಇಳಿಯಿತು, ಮಿಂಚಲಿಕ್ಕೆ ಸುರುವಾಗಿದೆ. ಮೇಲೆ ಈ ಸ್ಮಶಾನದಲ್ಲಿ ಕಾಣುವ ಈ ಭಯಂಕರ ಪ್ರಕಾರವು; ಅಂದಬಳಿಕ ಈ ಸ್ಥಳ ಬಿಡಬೇಕು. ಆತ್ಮರಕ್ಷಣೆಯೇ ಧರ್ಮವಲ್ಲವೇ! ನಡೆಯಿರಿ ನಾವು ಊರ ಹಾದೀ ಹಿಡಿಯೋಣ, ಎಂದನು. ಆಗ ಎಲ್ಲರೂ ಕೂಡಿ ನಡುಗುತ್ತ ಮುಖವನ್ನು ಕೆಳಗೆ ಮಾಡಿಕೊಂಡು ಆ ಸ್ಮಶಾನ ಭೂಮಿಯನ್ನು ದಾಟಿ ಊರ ಹಾದೀ ಹಿಡಿದರು.

# [ ೧೩ ]

...

ಕತ್ತಲದಲ್ಲಿ ನಿಂತ ಆ ದೀರ್ಘಕಾಯ ವ್ಯಕ್ತಿಯು ಚಿತೆಯ ಹತ್ತರ ಬಂದು ನಿಂತಿತು. ಉರಿಯು ಇನ್ನೂ ಶಾಂತವಾಗಿದ್ದಿಲ್ಲ. ಇನ್ನೂ ಅಗ್ನಿಗರ್ಭದಿಂದ ಹೊಗೆಯು ಹೊರಡುತ್ತಿತ್ತು. ಆ ಆಗಂತುಕನು ಸಂನ್ಯಾಸ ವೇಷಧಾರಿಯು; ಅವನು ಚಿತೆಯ ಹತ್ತರನಿಂತು ನಿಟ್ಟುಸುರುಬಿಟ್ಟು—ಹೋಗು ಸಾಧ್ವೀ ಹೋಗು. ಶೋಕ, ತಾಪ, ದುಃಖ, ಅತ್ಯಾಚಾರ ರಹಿತವಾದ ವೈಕುಂಠಕ್ಕೆ ಹೋಗು. ಶ್ರೀಹರಿಯು ನಿನ್ನಂಥ ಸತಿಯಳಿಗೆ ನಿಶ್ಚಯವಾಗಿಯೂ ಆಶ್ರಯ ಕೊಡುವನು. ಈ ಜನ್ಮದಲ್ಲಿ ನಿನ್ನ ಯಾವ ಇಷ್ಟೆಯೂ ಕೈಗೂಡಲಿಲ್ಲ. ಆ ಲೋಕದಲ್ಲಿಯಾದರೂ ನಿನ್ನ ಇಷ್ಟೆಯು ಪೂರ್ಣವಾಗಲಿ, ಎಂದನು. ಅವನ ಕಣ್ಣೀರ ಒಂದೆರಡು ಹನಿಗಳು ಕೂಡ ಚಿತೆಯ ಮೇಲೆ ಬಿದ್ದವು. ಅದರಿಂದ ಆ ಅಗ್ನಿಯೂ ಶಾಂತವಾಗಲಿಲ್ಲ. ಅವನ ಹೃದಯದೊಳಗೆ ಉರಿಯುತ್ತಿದ್ದ ಅಗ್ನಿಯೂ ಶಾಂತವಾಗಲಿಲ್ಲ.

ಕಡೆಗೆ ಆ ಸಂನ್ಯಾಸಿಯು ಶಾಂತವಾಗಲಿಕ್ಕೆ ಹತ್ತಿದ ಚಿತೆಯನ್ನು ಮೂರು ಸಾರೆ ಪ್ರದಕ್ಷಿಣೆ ಹಾಕಿ ಅಸ್ಫುಟ ಸ್ವರದಿಂದ—ನೀನು ವಿಧವೆಯೆಂದು ಅನ್ನುವವರು ಯಾರು? ಜನರ ದೃಷ್ಟಿಯಿಂದ ಸದ್ಯಕ್ಕೆ ನೀನು ವಿಧವೆಯಾಗಿರುವಿ; ಆದರೆ ಸ್ತ್ರೀಯರ ಅಲಂಕಾರವಾದ ಕುಂಕುಮವೂ ನಿನ್ನ ಮಂಗಲಸೂತ್ರವೂ ದೇವರ ದೃಷ್ಟಿಯಿಂದ ಇನ್ನೂ ನಿನ್ನಲ್ಲಿ ಶೋಭಿಸುತ್ತವೆ. ಹಾಯ್! ನಿನ್ನಂಥ ಹೆಂಡತಿಯು ದೊರೆತವನು ಧನ್ಯನು. ಹೋಗು, ದೇವೀ ಹೋಗು. ನೀನು ಸಾಧ್ವೀ ಶಿರೋಮಣಿಯಾಗಿರುತ್ತೀ.

ಈ ಪ್ರಕಾರ ಮಾತನಾಡಿ ಕಡೆಗೆ ಆಕಾಶದ ಕಡೆಗೆ ಕೈ ಎತ್ತಿ ಮುಖಮೇಲೆ ಮಾಡಿ—ಜನಾರ್ದನಾ, ಮಧುಸೂದನಾ ನನ್ನ ಈ ಕ್ಷುದ್ರ ಜೀವನದ ಯಾವ ಆಶೆಯೂ ಪೂರ್ಣವಾಗಲಿಲ್ಲ. ಬಹುದಿವಸಗಳ ಮೇಲೆ ಒಮ್ಮೆಯಾದರೂ ಹೆಂಡತಿಯನ್ನು ನೋಡಬೇಕೆಂದು ಬಹಳ ಆತುರದಿಂದ ಗೌಪ್ಯವಾಗಿ ಬಂದೆನು. ಅಹಾ! ದೇವರೇ, ನನ್ನ ಹಣೇಬರಹದಲ್ಲಿ ಏನು ಬರೆದಿದ್ದೀತು. ನಾನು ನನ್ನ ಹೆಂಡತಿಯ ಮೃತ್ಯುವನ್ನೇ ನೋಡಲಿಕ್ಕೆ ಬಂದಿರಬಹುದೆ? ಈ ಪ್ರಕಾರ ಆಗುವದೆಂದು

ನಾನು ಕನಸಿನಲ್ಲಿಯೂ ಕೂಡ ಭಾವಿಸಿದ್ದಿಲ್ಲ; ದೇವರ ಸೃಷ್ಟಿಯಲ್ಲಿ ದೊಡ್ಡ ಬಂಡೆಯು ಕೂಡ ಸವಿದು ಮಣ್ಣಿನಲ್ಲಿ ಕೂಡಿ ಹೋಗುವದು; ಆದರೆ ನನ್ನಂಥ ನಿರ್ಭಾಗ್ಯನಿಗೇಕೆ ಮೃತ್ಯುವು ಬರಬಾರದು? ಸಂಸಾರದಲ್ಲಿಯ ಆನಂದ, ಉತ್ಸಾಹ, ಆಶೆಗಳೆಲ್ಲವೂ ನನ್ನ ಪಾಲಿಗೆ ಇಲ್ಲ. ನೀಚ, ಜಾರ, ಚೋರರಂತೆ ವೇಷ ಬದಲಾಯಿಸಿಕೊಂಡು ಕಾಲ ಕಳೆಯಬೇಕಾಗಿರುವದಲ್ಲ; ಈ ಸಂಸಾರ ಬಂಧನದ ಮೋಹವು ಕಡಿಮೆಯಾಗಲೊಲ್ಲದು. ಹೇ ಸಚ್ಚಿದಾನಂದಾ! ಪರಮಾತ್ಮಾ!! ನನ್ನ ಮನಸ್ಸಿನಲ್ಲಿ ಶಾಂತಿಯನ್ನುಂಟುಮಾಡು. ಈ ಭವಪಾಶದಿಂದ ಉದ್ಧಾರ ಮಾಡು. ಈ ಚಿಂತಾಮಯ ಜೀವನಕ್ಕೆ ಶಾಂತಿಯನ್ನು ಕೊಟ್ಟು ನಿನ್ನ ಚರಣಗಳಲ್ಲಿ ನನಗೆ ಆಶ್ರಯವನ್ನು ಕೊಡು.

ಸಂನ್ಯಾಸಿಯ ಮನಸ್ಸಿನಲ್ಲಿ ಯಾವದೋ ಒಂದು ವಿಚಾರವು ಬಂದಿತು. ಕೂಡಲೆ ಅವನು ನೀರು ತರಬೇಕೆಂದು ಪಾತ್ರೆಯನ್ನು ಹುಡುಕಹತ್ತಿದನು. ಕಡೆಗೆ ಒಂದು ಒಡೆದ ಗಡಿಗೆಯು ಸಿಕ್ಕಿತು. ಅದನ್ನೇ ತೆಗೆದುಕೊಂಡು ನೀರು ತರಬೇಕೆಂದು ಹಳ್ಳದ ಹಾದೀ ಹಿಡಿದನು.

ಹಳ್ಳದ ದಂಡೆಯ ಮೇಲೆ ಇರುವ ಗಿಡದ ಬುಡದಲ್ಲಿ ಬೆಳಕು ಕಂಡನು. ಆಗ ಅವನು ಮನಸ್ಸಿನಲ್ಲಿ ಯಾವನಾದರೊಬ್ಬ ಬೈರಾಗಿಯು ತಂಬಾಕ ಸೇದುತ್ತಿರಬಹುದೆಂದು ಭಾವಿಸಿದನು. ಕಡೆಗೆ ಅವನು ಆ ಗಿಡದ ತೀರ ಸಮೀಪಕ್ಕೆ ಹೋದನು. ಅಲ್ಲಿಯ ಭಯಂಕರವಾದ ನೋಟವನ್ನು ನೋಡಿದ ಕೂಡಲೆ ಅವನ ಮೈಯಲ್ಲಿ ನಡುಗು ಹುಟ್ಟಿತು. ರಾತ್ರಿಯ ತಂಗಾಳಿಯ ಸಮಯದಲ್ಲಿ ಸಹ ಅವನ ಮೈಯೆಲ್ಲ ಬೆವತು ನೀರು ಹರಿಯಹತ್ತಿತು. ಇವನಿಗೆ ದೂರದಿಂದ ಕಂಡ ಬೆಳಕು ಒಂದು ಕಂದೀಲಿನದಾಗಿತ್ತು. ಆ ಕಂದೀಲದ ಹತ್ತರವೇ ಒಬ್ಬ ಮನುಷ್ಯನು ಡಬ್ಬು ಬಿದ್ದಿದ್ದು, ಆ ಮನುಷ್ಯನ ತಲೆಯು ಒಡೆದಿತ್ತು. ಅದರ ರಕ್ತದಿಂದ ಅವನ ಬೆನ್ನು ಪೂರಾ ಕೆಂಪಾಗಿತ್ತು.

ಸಂನ್ಯಾಸಿಯು ಧೈರ್ಯಮಾಡಿ ಮುಂದಕ್ಕೆ ಹೋಗಿ ಆ ಮನುಷ್ಯನನ್ನು ಎರಡು-ಮೂರು ಸಾರೆ ಹೊರಳಾಡಿಸಿದನು. ಆ ವ್ಯಕ್ತಿಗೆ ಮೈಮೇಲೆ ಎಚ್ಚರವೇ ಇದ್ದಿಲ್ಲ. ನಾಡಿಯನ್ನು ಪರೀಕ್ಷಿಸಿದನು. ನಾಡಿಗಳ ಗತಿಯು ಮಂದವಾಗಿತ್ತು. ಭಯಂಕರವಾದ ಹೊಡತದಿಂದ ಮೂರ್ಛೆ ಬಂದಿರುವದೆಂದು ತಿಳಿದು, ಸಂನ್ಯಾಸಿಯು ತನ್ನ ಕೆಲಸವನ್ನು ಬಿಟ್ಟು ಈ ಮೂರ್ಛೆ ಹೋದವನನ್ನು ಎಚ್ಚರಿಸುವ ಉಪಾಯಕ್ಕೆ ತೊಡಗಿದನು.

ಸಂನ್ಯಾಸಿಯು ಕಂದೀಲನ್ನು ಕೈಯಲ್ಲಿ ಹಿಡಕೊಂಡು ಹಳ್ಳದೊಳಗೆ ಹೋಗಿ, ತಾನು ಹೊದ್ದುಕೊಂಡ ಶಾಟಿಯನ್ನು ನೀರಿನಲ್ಲಿ ತೋಯಿಸಿಕೊಂಡು ಬಂದನು. ಎಣ್ಣೆ ತೀರಿದ್ದರಿಂದ ಬರುವಾಗ ದಾರಿಯಲ್ಲಿಯೇ ದೀಪವು ಸಣ್ಣಾಯಿತು. ಅವನು ಕತ್ತಲಲ್ಲಿಯೇ ಕಾಲಾಡಿಸುತ್ತ ಆ ಮನುಷ್ಯನ ಹತ್ತರ ಬಂದನು. ತರುವಾಯ ಆ ಮನುಷ್ಯನನ್ನು ನೆಟ್ಟಗೆ ಮಲಗಿಸಿ, ಕೈ-ಕಾಲುಗಳನ್ನು ಸರಿಯಾಗಿ ಮಾಡಿ ತಲೆಯನ್ನು ಎತ್ತಿ ತೊಡೆಯ ಮೇಲೆ ಇಟ್ಟುಕೊಂಡು, ತಂದ ದೋತರದ ನೀರನ್ನು ಹಿಂಡಿ, ೩-೪ ಹನಿ ಅವನ ಬಾಯಲ್ಲಿ ಹಾಕಿದನು; ಮತ್ತು ಗಾಳೀ ಬೀಸ ಹತ್ತಿದನು.

ಹೀಗೆ ಉಪಚಾರ ಮಾಡಲು, ಆ ವ್ಯಕ್ತಿಗೆ ಚೇತನವು ಬಂದಿತು. ಅವನೇ ಬಸವಂತನು. ಬಸವಂತನಿಗೆ ಎಚ್ಚರವಾದದ್ದನ್ನು ಕಂಡು ಸಂನ್ಯಾಸಿಯು ಅವನನ್ನು ಕುರಿತು—"ತಮ್ಮಾ, ನೀನು ಗಾಬರಿಯಾಗಬೇಡ. ನಾನು ಒಬ್ಬ ಮನುಷ್ಯನು. ಸಂಸಾರಬಂಧನದಿಂದ ಮುಕ್ತನಾಗಲೆಳಸಿದ ಸಂನ್ಯಾಸಿಯು. ಮೂರ್ಛಿತನಾದ ನಿನ್ನನ್ನು ನೋಡಿ ಉಪಚಾರ ಮಾಡಿದೆನು. ನಿನಗೆ ಎಲ್ಲಿಯಾದರೂ ಬಹಳ ಪೆಟ್ಟು ಹತ್ತಿರುವದೇನು?

ನಿಜವಾಗಿಯೂ ಬಸವಂತನಿಗೆ ಪೆಟ್ಟು ಹತ್ತಿತ್ತು; ಒಹಳ ರಕ್ತವು ಹೊರ ಬಿದ್ದ ಕಾರಣ ಅವನು ಬಹಳ ನಿಶ್ಶಕ್ತನಾಗಿದ್ದನು. ಆಗ ಅವನು ತಾನು ಎಲ್ಲಿರುವೆನೆಂಬದನ್ನು ತಿಳಕೊಳ್ಳುವದರ ಸಲುವಾಗಿ ಸುತ್ತಲೂ ನೋಡಿದನು. ಆಗ ಅವನಿಗೆ ಹಿಂದಿನ ಎಲ್ಲ ಸಂಗತಿಯೂ ನೆನಪಿಗೆ ಬಂತು. ಕೂಡಲೆ ಅವನು ಎದ್ದು ನಿಂತು—"ಸ್ವಾಮೀ, ನೀವು ಯಾರೇ ಆಗಿರಲಿ, ನನಗೊಂದು ಉಪಕಾರಮಾಡಿರಿ. ಯಾರೋ ದುಷ್ಟರು ಒಬ್ಬ ಸಾಧ್ವಿಯನ್ನು ಸ್ಮಶಾನಭೂಮಿಯಿಂದ ಅಪಹರಿಸಿಕೊಂಡು ಹೋಗಿರುವರು. ಅವರೇ ನನ್ನ ತಲೆ ಒಡೆದಿರುವರು. ಇರಲಿ. ಸದ್ಯಕ್ಕೆ ಆ ಸ್ತ್ರೀಯು ಬಹಳ ವಿಪತ್ತಿಗೆ ಗುರಿಯಾಗಿರಬಹುದು. ಮೊದಲು ಅವಳನ್ನು ರಕ್ಷಿಸಿರಿ. ಅವಳು ನನ್ನ ಪ್ರೀತಿಯ ಸಹೋದರಿ ಸಮಾನಳು!"

ಸಂನ್ಯಾಸಿಯು ಈ ಮಾತುಗಳನ್ನು ಕೇಳಿದ ಕೂಡಲೆ ಗಾಬರಿಯಾಗಿ ಉತ್ಕಂಠೆಯಿಂದ—"ಅವಳು ಯಾವ ಊರವಳು?" ಎಂದು ಕೇಳಿದನು."

ಬಸವಂತ—ರಾಮಪುರದವಳು.

ಸಂನ್ಯಾಸಿ—ರಾಮಪುರದವಳೇ? ಅಲ್ಲಿ ಯಾರ ಮನೆಯವಳು?

ಬಸವಂತ—ಬಳವಂತರಾಯರ ಮಗಳು.

ಸಂನ್ಯಾಸಿ—ಕಮಲೆ ಏನು?

ಬಸವಂತ—ಹೌದು. ಅವಳು ಬ್ರಾಹ್ಮಣಮನೆತನದವಳು. ನಾನು ಶಿಂಪಿಗನು. ಆದರೂ ಅವಳನ್ನು ಅಕ್ಕನಂತೆ ಭಾವಿಸಿ ನಡಕೊಳ್ಳುವೆನು.

ಸಂನ್ಯಾಸಿ—ನೀನು ಯಾವ ಊರವನು?

ಬಸವಂತ—ನಾನು ಕೃಷ್ಣಾಪುರದವನು.

ಸಂನ್ಯಾಸಿ—ನೀನು ರಾಮಪ್ಪನ ಮಗನಾದ ಬಸವಂತನೇನು?

ಸಂನ್ಯಾಸಿಯ ಮಾತುಗಳನ್ನು ಕೇಳಿ ಬಸವಂತನಿಗೆ ಬಹಳ ಆಶ್ಚರ್ಯವಾಯಿತು. ಅವನು ಸಂನ್ಯಾಸಿಯ ಕಾಲು ಹಿಡಕೊಂಡು—ಸ್ವಾಮೀ, ನೀವು ಯಾರು? ನನ್ನ ಗುರುತು ತಮಗೆ ಹೇಗೆ ಹತ್ತಿತು? ನನಗಂತೂ ತಮ್ಮ ಪರಿಚಯವಿಲ್ಲ.

ಸಂನ್ಯಾಸಿ—ಇರಲಿ. ಅದನ್ನು ಹಿಂದಿನಿಂದ ಹೇಳುವೆನು. ಈಗ ನಿನಗೆ ಆರಾಮು ಆಗಿದೆಯಷ್ಟೇ?

ಬಸವಂತ—ಈಗ ಗುಣವಾಗಿದೆ.

ಸಂನ್ಯಾಸಿ—ಹಾಗಾದರೆ ನನ್ನ ಸಂಗಡ ಸ್ವಲ್ಪ ಹಾದಿಯನ್ನು ನಡೆಯಬಲ್ಲಿಯಷ್ಟೇ?

ಬಸವಂತ—ನಡೆಯುವೆನು.

ಸಂನ್ಯಾಸಿ—ಹಾಗಾದರೆ ನನ್ನ ಸಂಗಡ ಬಾ.

ಇಬ್ಬರೂ ಆ ಕತ್ತಲಲ್ಲಿಯೇ ಹೊರಟರು. ಆಗ ಮೋಡಗಳು ಗಾಳಿಯಿಂದ ಚದರಹತ್ತಿದವು. ಉಜ್ವಲವಾದ ನಕ್ಷತ್ರಗಳಿಂದ ದಾರಿಯು ಚನ್ನಾಗಿ ಕಾಣಿಸಹತ್ತಿತು. ಅವರಿಬ್ಬರೂ ದೊಡ್ಡ ಹಾದಿಗೆ ಬಂದರು. ಅಲ್ಲಿ ಒಂದು ಬಿದುರಿನಪೆಳೆಯಿತ್ತು. ಸಂನ್ಯಾಸಿಯು ಅದರಲ್ಲಿಯ ಎರಡು ಗಳಗಳನ್ನು ಮುರಿದು ಕೈಯಲ್ಲಿ ಹಿಡಿಯಲಿಕ್ಕೆ ಅನುಕೂಲವಾಗುವಂತೆ ಮಾಡಿ ಒಂದನ್ನು ತಾನು ತೆಗೆದುಕೊಂಡನು. ಮತ್ತೊಂದನ್ನು ಬಸವಂತನ ಕೈಯಲ್ಲಿ ಕೊಟ್ಟನು. ಆ ಮೇಲೆ ಅವನನ್ನು ಕುರಿತು—ಆದ ಸಂಗತಿಯಾದರೂ ಏನು? ಮೊದಲಿನಿಂದ ಹೇಳು, ಎಂದನು.

ಬಸವಂತನು ಸ್ಮಶಾನಕ್ಕೆ ಬಂದ ಮೇಲೆ ವರ್ತಿಸಿದ ಎಲ್ಲ ಸಂಗತಿಯನ್ನೂ ಒಂದೇ ಉಸುರಿನಲ್ಲಿ ಹೇಳಿ ಬಿಟ್ಟನು.

ಸಂನ್ಯಾಸಿಯು ಕ್ಷಣಹೊತ್ತು ಮನಸ್ಸಿನಲ್ಲಿ ಏನೋ ವಿಚಾರ ಮಾಡಿ, ಬಸವಂತನನ್ನು ಕುರಿತು—ದರೋಡೆಖೋರರು ಎಷ್ಟು ಜನರಿದ್ದರು?

ಬಸವಂತ—ಗೊತ್ತಿಲ್ಲ. ನನಗೆ ಅವರನ್ನು ನೋಡಲಿಕ್ಕೆ ಅವಕಾಶ ಸಿಗಲಿಲ್ಲ.

ಸಂನ್ಯಾಸಿಯು ಉಸಿರ್ಗೆರೆದು—"ಹಾಗಾದರೆ ನಾವು ಹಳ್ಳದ ಸುತ್ತ ಮುತ್ತು ನೋಡೋಣ. ಈ ವೇಳೆಯಲ್ಲಿ ನಿನ್ನ ಕಂದೀಲದಲ್ಲಿ ಎಣ್ಣೆಯು ಇದ್ದರೆ....

ಬಸವಂತ—ಅದಕ್ಕೇಕೆ ಚಿಂತೆಮಾಡುವಿರಿ; ನಾನು ಏನಾದರೂ ಮಾಡಿ ಬೆಳಕಿನ ವ್ಯವಸ್ಥೆ ಮಾಡುವೆನು. ನಡೆಯಿರಿ, ಹಳ್ಳಕ್ಕೆ ಹೋಗೋಣ, ಎಂದನು.

ಬಸವಂತನು ೮-೧೦ ಗೊರವಿ ಕಟಿಗೆಗಳನ್ನು ಸಂಪಾದಿಸಿಕೊಂಡು ಆರಲಿಕ್ಕೆ ಬಂದ ಚಿತೆಯ ಹತ್ತರ ಹೋಗಿ ಅವನ್ನು ಹಚ್ಚಿಕೊಂಡು ಬಂದನು. ಬಸವಂತನು ಈವರೆಗೂ ಸಂನ್ಯಾಸಿಯ ಆಕಾರವನ್ನು ಪೂರ್ಣ ನೋಡಿದ್ದಿಲ್ಲ. ಬೆಳಕಿನಲ್ಲಿ ನೋಡಿದನು. ಸಂನ್ಯಾಸಿಯ ದೇಹವು ಧಷ್ಟ-ಪುಷ್ಟವಾಗಿತ್ತು. ಅವನ ವಿಶಾಲವಾದ ಬಾಹುಗಳೂ, ತೇಜೋಮಯ ಮುಖವೂ ನೋಡುವವರಲ್ಲಿ ಭಕ್ತಿವಿನಯಗಳನ್ನುಂಟು ಮಾಡುತ್ತಿದ್ದವು; ಆದರೆ ಸಂನ್ಯಾಸಿಯು ಬಸವಂತನಿಗೆ ಪೂರ್ಣ ಅಪರಿಚಿತನಾಗಿ ತೋರಿದನು. ಆಗ ಬಸವಂತನು ಉರಿಯುವ ಕಟ್ಟಿಗೆಗಳನ್ನು ಹಿಡಕೊಂಡು ಹಳ್ಳದ ಹಾದೀ ಹಿಡಿದನು.

ಸಂನ್ಯಾಸಿಯು ಅವನ ಹಿಂದೆ ಹಿಂದೆ ಹೊರಟನು. ಹಳ್ಳದಲ್ಲಿ ಪ್ರವೇಶಮಾಡಿದ ಕೂಡಲೆ ಸನ್ಯಾಸಿಯು ಬಸವಂತನನ್ನು ಕುರಿತು—"ನಿಮ್ಮ ಅಕ್ಕನು ಎಲ್ಲಿಯವರೆಗೆ ಹೋಗಿದ್ದಳು?" ಎಂದು ಕೇಳಿದನು.

ಬಸವಂತನು ಕೈಯೊಳಗಿನ ಕಟ್ಟಿಗೆಯನ್ನು ಮುಂದಕ್ಕೆ ಚಾಚಿ, ಇಲ್ಲಿಯವರೆಗೆ, ಎಂದು ತೋರಿಸಿದನು. ಸಂನ್ಯಾಸಿಯು ಅಲ್ಲಿಂದ ಸುತ್ತಲೂ ಪರೀಕ್ಷೆ ಮಾಡಿದನು. ಅಲ್ಲಿಂದ ಉತ್ತರಕ್ಕೆ ಮೂರುನಾಲ್ಕು ಜನರು ಹೋದಂತೆ ಹೆಜ್ಜೆಗಳುಕಂಡು ಬಂದವು. ಸಂನ್ಯಾಸಿಯುಅವುಗಳ ಹಿಂದೆಕೆಲವು ದಾರಿಹೋಗಲು, ಮುಂದೆ ಅಲ್ಲಿಂದ ಕೆಲವು ಹೆಜ್ಜೆಗಳುಪಶ್ಚಿಮಕ್ಕೂ, ಕೆಲವು ಹೆಜ್ಜೆಗಳು ದಕ್ಷಿಣಕ್ಕೂ ಹೋಗಿದ್ದವು. ಅವನ್ನು ನೋಡಿದ ಕೂಡಲೆ ಸಂನ್ಯಾಸಿಯು ಗೊಂದಲಕ್ಕೆಬಿದ್ದನು. ಕಮಲೆಯನ್ನು ಒಯ್ದುವರು ಯಾವದಿಕ್ಕಿಗೆ ಹೋಗಿರಬಹುದು? ಎಂದು ವಿಚಾರ ಮಾಡಹತ್ತಿದನು. ವಿಚಾರವು ಬಗೆ ಹರಿಯಲಿಲ್ಲ. ಸಿಟ್ಟಿನಿಂದ ಅವನ ಮುಖವು ಕೆಂಪಾಯಿತು. ಆಗ ಬಸವಂತನು ಸನ್ಯಾಸಿಯನ್ನು ಕುರಿತು—ಪ್ರಭೋ, ಏನಾಯಿತು? ಎಂದನು.

ಸಂನ್ಯಾಸಿ—ಆಗುವದೇನು? ನನ್ನ ಮನೆ ಹಾಳಾಯಿತು, ಎಂದನು.

ಬಸವಂತ—ನೀವು ಯಾರು? ಈ ವಿಷಯದಲ್ಲಿ ನಿಮ್ಮ ಸರ್ವನಾಶಕ್ಕೆ ಕಾರಣವು ಯಾವದು? ನಿಮಗೂ ನಮ್ಮ ಅಕ್ಕನಿಗೂ ಇರುವ ಸಂಬಂಧವಾದರೂ ಏನು?

ಸಂನ್ಯಾಸಿಯ ಎರಡೂ ಕಣ್ಣುಗಳು ಕೆಂಪಗಾದವು. ಆಗ ಅವನು ಗಟ್ಟಿಯಾಗಿ—"ನಾನೇ ದುರ್ಭಾಗ್ಯನಾದ ಬಳವಂತರಾಯನು-ಕಮಲೆಯ ತಂದೆಯು, ತಿಳಿಯಿತೇ?" ಎಂದನು.

ಸಂನ್ಯಾಸಿಯ ಮಾತುಗಳನ್ನು ಕೇಳಿದ ಕೂಡಲೆ ಭಯದಿಂದ ಬಸವಂತನ ಮೈಕೂದಲು ನೆಟ್ಟಗಾದವು. ಬಳವಂತರಾಯನು ಸತ್ತಿರುವನೆಂದೇ ಅವನು ನಂಬಿದ್ದನು. ಯಾಕಂದರೆ ಭುಜಂಗರಾಯರು ಸ್ವತಃ ಆ ಸುದ್ದಿ ಹೇಳಿದ್ದರು. ಕಾರಣ ಸಂನ್ಯಾಸಿಯ ಮಾತಿನಮೇಲೆ ಬಸವಂತನ ವಿಶ್ವಾಸವು ಕೂಡಲಿಲ್ಲ. ಆಗ ಅವನು ಧೈರ್ಯದಿಂದ—ಬಳವಂತರಾಯರು ಈ ಲೋಕದಲ್ಲಿಯೇ ಇಲ್ಲ.

ಸಂನ್ಯಾಸಿಯು ಗಂಭೀರಭಾವದಿಂದ—ಇಲ್ಲ ಆ ಹತಭಾಗ್ಯನಾದ ಬಳವಂತರಾಯನು ಸತ್ತಿಲ್ಲ; ಯಾವ ಬಳವಂತರಾಯನು ಪೋಲೀಸರ ವಾರಂಟಿಗೆ ಹೆದರಿ ಗುಪ್ತವಾಗಿ ಇದ್ದನೋ ಮತ್ತು ಹೆಂಡಿರು-ಮಕ್ಕಳನ್ನು ಗೋಳಿಗೆ ಹಾಕಿದನೋ, ಅಂಥ ಚಾಂಡಾಲನಾದ ಬಳವಂತರಾಯನು ನಾನೇ; ಹೆಂಡತಿಯು ಬಹು ಕಷ್ಟಪಟ್ಟು ಮರಣ ಹೊಂದಲು, ಈ ವರೆಗೂ ಯೋಗಕ್ಷೇಮ ಸಹ ವಿಚಾರಿಸದ ನಾನು, ಅವಳ ಮರಣದ ವೇಳೆಗೆ ಬಂದಿರುವೆನು. ನಾನು ಬಹಳ ನಿಷ್ಠುರನು.

ಗಂಗಾಬಾಯಿಯು ಸಾಯುವಾಗ ಬಾಗಿಲ ಕಡೆಗೆ ನೋಡಿ—"ಇಗೋ ಅವರೇ ನನ್ನನ್ನು ಕರೆದುಕೊಂಡು ಹೋಗಲಿಕ್ಕೆ ಬಂದಿರುವರು" ಎಂದು ಒದರಿದ್ದು ಬಸವಂತನ ನೆನಪಿಗೆ ಬಂತು; ಆಗ ಅವನು ಆ ಮಾತು ಬೇನೆಯಲ್ಲಿಯ ಆಲಾಪವೆಂದು ತಿಳಿದಿದ್ದನು. ಆಗಿನ ವೇಳೆಯಲ್ಲಿ ಇವರೇ ಬಂದಿರಬಹುದೆಂದು ಭಾವಿಸಿ ಸಂನ್ಯಾಸಿಯನ್ನು ಕುರಿತು—"ಹಾಗಾದರೆ ನಿಮ್ಮ ಮರಣ ವಾರ್ತೆಯು ಊರಲ್ಲಿ ಹೇಗೆ ಹಬ್ಬಿತು" ಎಂದನು.

ಸಂನ್ಯಾಸಿಯು—ನಾನು ಹಂಪಿಯಲ್ಲಿದ್ದಾಗ ಒಬ್ಬ ಬ್ರಾಹ್ಮಣನು ಮಾರಿಕಾಬಂದು ಸತ್ತನು. ಅವನಿಗೆ ಯಾರೂ ದಿಕ್ಕಿದ್ದಿಲ್ಲ. ಆಗ ಸತ್ತವನು ರಾಮಪುರದವನೆಂದು ನಾನು ಸುದ್ದೀ ಹುಟ್ಟಿಸಿದೆನು. ನಮ್ಮ ದೇಸಾಯಿಯರು ಅಲ್ಲಿಗೆ ಬಂದ ಸುದ್ದಿ ಸಹ ನನಗೆ ಹಿಂದಿನಿಂದ ತಿಳಿಯಿತು. ಬಸವಂತಾ ನಾನು ಹೀಗೆ ಮಾಡಿದ್ದು ಬಹಳ ಅನ್ಯಾಯವು. ಜೀವದಮೇಲಿನ ಮೋಹದಿಂದಲೂ ಮರ್ಯಾದೆಯ ಭಯದಿಂದಲೂ ಹೀಗೆ ಮಾಡಿದೆನು. ನಿಜವಾಗಿಯೂ ನಾನು ನಿರ್ದೋಷಿಯಿರುವೆನು. ಇದೆಲ್ಲವೂ ರುದ್ರಪ್ಪನ ಕಪಟಕಾರಸ್ಥಾನವು; ಹೀಗಿದ್ದರೂ ನಾನು ಗುಪ್ತರೀತಿಯಿಂದ ಹೆಂಡಿರುಮಕ್ಕಳಯೋಗಕ್ಷೇಮದ ಸುದ್ದಿಯನ್ನು ತಿಳಿದುಕೊಳ್ಳುತ್ತಿದ್ದೆನು.

ಬಸವಂತ—ಹಾಗಾದರೆ ಅವ್ವನು, ನೀವು ಸತ್ತಿರುವಿರೆಂದು ತಿಳಿದು ವಿಧವೆಯಂತೆ ಕಾಲಕ್ರಮಣ ಮಾಡುತ್ತಿದ್ದಳು. ಈ ಸುದ್ದಿಯು ನಿಮಗೆ ಗೊತ್ತಿರಲಿಕ್ಕಿಲ್ಲ.

ಸಂನ್ಯಾಸಿಯ ಕಣ್ಣುಗಳಲ್ಲಿ ನೀರು ಬಂದವು. ಆಗ ಅವನು—ತಮ್ಮಾ ಬಸವಂತಾ, ಅದೂ ನನಗೆ ಗೊತ್ತಿತ್ತು; ಆದರೆ ಮಾಡುವದೇನು? ಉಪಾಯವೇ ಇದ್ದಿಲ್ಲ. ದೈವವೇ ಪ್ರತಿಕೂಲವಾಗಿತ್ತು. ಆದ್ದರಿಂದಲೇ ಸಾಧ್ವಿಯಾದ ನನ್ನ ಹೆಂಡತಿಯನ್ನೂ, ಸ್ನೇಹಮಯ ಮಗಳನ್ನೂ ಕಳಕೊಂಡೆನು. ಮುಂದೆ ಅವನಿಂದ ಮಾತಾಡುವದಾಗಲಿಲ್ಲ. ಸಂನ್ಯಾಸಿಯ ಕಣ್ಣುಗಳೊಳಗಿಂದ ದಳ ದಳ ನೀರು ಹರಿಯಹತ್ತಿದವು. ಆದರೂ ಅವನು ದುಃಖವನ್ನು ನುಂಗಿಕೊಂಡು—ಬಸವಂತಾ, ಈ ದರೋಡೆಯು ಯಾರಿಂದ ಆಗಿರುವದು? ನಿನ್ನ ತರ್ಕವೇನು?

ಬಸವಂತ—ನನಗಂತೂ ಏನೂ ತಿಳಿಯಲೊಲ್ಲದು.

ಸಂನ್ಯಾಸಿ—ಹಾಗಾದರೆ ನಾವು ಎಲ್ಲಿ ಹುಡುಕಬೇಕು?

ಬಸವಂತ—ಸತಿಯರ ಸತೀತ್ವರಕ್ಷಣ ಸಹಾಯಕರ್ತೃವಾದ ದೇವರೇ ಈ ವಿಷಯದಲ್ಲಿ ನಮಗೆ ಮುಂದಿನ ಮಾರ್ಗ ತೋರಿಸಬೇಕು, ಎಂದನು. ಆಗ ಸಂನ್ಯಾಸಿಯು—ಬಸವಂತಾ, ನಿಜವಾಗಿಯೂ ನಾನು ಮೂಢನು; ಕುರುಡನು. ಇಷ್ಟು ಸಾಮಾನ್ಯವಾದ ಮಾತು ಸಹ ನನ್ನ ಮನಸ್ಸಿನಲ್ಲಿ ಹುಟ್ಟಲಿಲ್ಲ. ದೇವಾ, ನನ್ನಲ್ಲಿ ನಿನ್ನಮೇಲೆ ಪೂರ್ಣ ವಿಶ್ವಾಸ ಹುಟ್ಟತಕ್ಕಂಥ ಬುದ್ಧಿಯನ್ನು ಕೊಡು. ಬಸವಂತಾ, ನೀನೇ ಧನ್ಯನು! ಎಂದನು.

ಮತ್ತೆ ಬಸವಂತನನ್ನು ಕುರಿತು—ಕಮಲೆಯ ಮೈಮೇಲೆ ಏನಾದರೂ ಆಭರಣಗಳಿದ್ದವೇನು?

ಬಸವಂತ—ಇದ್ದವು; ಆದರೆ ಅವು ಬಂಗಾರದವಲ್ಲ. ಎರಡು ಹಿತ್ತಾಳಿಯ ಬಳೆಗಳು.

ಸಂನ್ಯಾಸಿ—ನೀವು ಸ್ಮಶಾನಕ್ಕೆ ಬರುವಾಗ ನಿಮಗೆ ಅಪರಿಚಿತರಾದವರು ಯಾರಾದರೂ ನಿಮ್ಮ ಹಿಂದಿನಿಂದ ಬರುತ್ತಿದ್ದರೇನು?

ಬಸವಂತ—ನಾವು ಆ ಕಡೆಗೆ ಲಕ್ಷ್ಯಕೊಡಲಿಲ್ಲ.

ಸಂನ್ಯಾಸಿ—ಕಮಲೆಯು ಗಂಡನ ಮನೆಗೆ ತಿರುಗಿ ಯಾಕೆ ಹೋಗಲಿಲ್ಲ?

ಬಸವಂತ—ಮನೋಹರಪಂತರು ಈಗ ಕೆಲವು ದಿವಸಗಳ ಹಿಂದೆ ಇಲ್ಲಿಗೆ ಬಂದು, ಅಕ್ಕನ ಸಂಗಡ ಬಹಳ ನಿಷ್ಠುರತೆಯಿಂದ ವರ್ತಿಸಿ, ಎಲ್ಲರ ಮನಸ್ಸೂ ನೋಯುವಂತೆ ಮಾಡಿ ಹೋದರು, ಅವರ ಸ್ವಭಾವವು ನಿಮಗೆ ಗೊತ್ತಿಲ್ಲವೇನು?

ಅವರ ಮನೆಯು ಸಹ ಒತ್ತೀಲಿದೆ. ಅಂದಮೇಲೆ ಅಕ್ಕನು ಹೋಗಿ ಎಲ್ಲಿರಬೇಕು?

ಸಂನ್ಯಾಸಿಯು ಮನಸ್ಸಿನಲ್ಲಿಯೇ—ಹೌದು. ನಮ್ಮ ಅಳಿಯನು ಬಹಳ ನೀಚನು; ಎಂದು ಕೆಲವು ಹೊತ್ತು ಮನಸ್ಸಿನಲ್ಲಿ ಏನೋ ಯೋಚಿಸಿ, ಬಸವಂತ ನನ್ನು ಕುರಿತು—"ನಾನು ನಿನಗೆ ಇನ್ನೊಂದು ಪ್ರಶ್ನೆ ಕೇಳುತ್ತೇನೆ. ವಿಧಿಯು ಇನ್ನೂ ಏನೇನು ಮಾಡಿಸುವದೋ ಮಾಡಿಸಲಿ.

ಬಸವಂತನು ಉದಾಸೀನತೆಯಿಂದ—ನೀವು ಯಾವ ಪ್ರಶ್ನೆಯನ್ನು ಕೇಳ ಬೇಕೆಂದು ಮಾಡಿರುವಿರೋ ಆ ಪ್ರಶ್ನೆಯು ನನಗೆ ಗೊತ್ತಾಯಿತು. ನಮ್ಮ ಅಕ್ಕ ನಾದ ಕಮಲೆಯು ಮಹಾ ಪತಿವ್ರತೆಯು. ಎಂದೂ ಯಾರ ಮುಖವನ್ನೂ ನೋಡಿದವಳಲ್ಲ. ಅಂಥವಳ ಬಗ್ಗೆ ದುಷ್ಟ ವಿಚಾರ ಮಾಡಿದರೆ, ನಮಗೇ ಪಾಪವು ಬರುವದು. ಅವಳು ಪೂರ್ಣ ಶುದ್ಧ ವಸ್ತುವು. ಆದರೂ ಅವಳ ಗಂಡನು ಊರಿಗೆ ಬಂದು ಪಶುವಿನಂತೆ ವರ್ತಿಸಿ, ತಿರುಗಿಹೋದನು. ಅಂದಿನಿಂದಲೇ ಅವ್ವನಿಗೆ ಜ್ವರ ಬರಹತ್ತಿದವು. ಕಡೆಗೆ ಆ ಹೃದ್ರೋಗದಿಂದಲೇ ಮರಣಹೊಂದಿದಳು.

ಸಂನ್ಯಾಸಿಯ ಕಣ್ಣುಗಳಲ್ಲಿ ನೀರು ಬಂದವು. ಆಗ ಅವನು—ಹಾಗಾದರೆ ಅವಳ ಶತ್ರುವು ಯಾರು? ಯಾರು ಇಂಥ ನೀಚ ಕೆಲಸ ಮಾಡಿದರು?

## [ ೧೪ ]

...

ಯಾರೋ ಒಬ್ಬರು ಒಮ್ಮೆಂದೊಮ್ಮೆಲೆ ಆ ಗಂಭೀರವಾದ ಶಾಂತ ತೆಯನ್ನು ಭಂಗಮಾಡಿ ಆ ಕಗ್ಗತ್ತಲೆಯಲ್ಲಿಯೇ ದೂರ ನಿಂತುಕೊಂಡು—ಇಂಥ ನೀಚ ಕೆಲಸವನ್ನು ಯಾರು ಮಾಡಿರುವರೋ ಅವರ ಹೆಸರನ್ನು ನಾನು ಹೇಳು ತ್ತೇನೆ, ಎಂದರು.

ಸುಮಾರು ಎಂಟುತಾಸು ರಾತ್ರಿಯಾಗಿತ್ತು. ನಿರ್ಜನವಾದ ಅಡವಿಯು; ಈ ವೇಳೆಯಲ್ಲಿ ಒಮ್ಮೆಂದೊಮ್ಮೆ ಸ್ತ್ರೀಯರ ಕಂಠಸ್ವರವನ್ನು ಕೇಳಿದ ಕೂಡಲೆ ಬಳ ವಂತರಾಯನೂ ಬಸವಂತನೂ ಬೆರಗಾದರು. ಆಗ ಬಳವಂತರಾಯನು ಆ ನೂತನ ವ್ಯಕ್ತಿಯನ್ನು ಕುರಿತು—ನೀನು ಯಾರು? ಎದುರಿಗೆ ಬಂದು ಮಾತನಾಡು. ನಮಗೆ ಅಂಜುವ ಕಾರಣವಿಲ್ಲ. ನಮ್ಮಿಂದ ನಿನಗೆ ಏನೂ ಕೆಡಕಾಗುವದಿಲ್ಲ, ಎಂದನು; ಬಸವಂತನು ಇದೊಂದು ಭೂತಚೇಷ್ಟೆಯೆಂದೇ ತಿಳಿದನು. ಬಳವಂತರಾಯನು ಮಾತ್ರ, ಈಗ ಬಂದ ಸ್ತ್ರೀಯು ಭಗವತ್ಪ್ರೇರಿತಳೆಂದು ಭಾವಿಸಿದನು.

ಸುಮಾರು ಇಪ್ಪತ್ತುವರುಷದ ತರುಣಿಯೊಬ್ಬಳು ಆ ಕತ್ತಲೆಯಲ್ಲಿಯೇ ಮುಂದೆ ಬಂದು ಬಳವಂತರಾಯನಿಗೆ ಸಾಷ್ಟಾಂಗ ನಮಸ್ಕಾರಮಾಡಿ, ಎದುರಿಗೆ ನಿಂತುಕೊಂಡಳು.

ಬಳವಂತರಾಯ:—ನೀನು ಯಾರು? ನಿನ್ನ ಊರು ಯಾವದು?

ಆ ಸ್ತ್ರೀಯು:—ನಾನು ರಾಮಪುರದವಳು.

ಬಳವಂತರಾಯ:—ನಾನು ರಾಮಪುರದಲ್ಲಿ ಅನೇಕ ಜನರನ್ನು ಬಲ್ಲೆನು; ಆದರೆ ನೀನು ಯಾರ ಮಗಳು?

ಸ್ತ್ರೀ:—ಆ ಪರಿಚಯವನ್ನು ತೆಗೆದುಕೊಂಡು ಏನು ಮಾಡುವಿರಿ? ನಾನು ಒಬ್ಬ ಕುಲಕಲಂಕಿನಿಯಾದ ಪಾಪಿಷ್ಠಳಿದ್ದೇನೆ.

ಬಳವಂತರಾಯ:—ಈ ರಾತ್ರಿಯಲ್ಲಿ ಇಲ್ಲಿಗೇಕೆ ಬಂದಿರುವಿ?

ಸ್ತ್ರೀ—ನಿಮಗೆ ಸುದ್ದಿ ತಿಳಿಸಲಿಕ್ಕೆ ಬಂದಿರುವೆನು; ಮತ್ತು ಸಂಕಟಕ್ಕೊಳಗಾಗತಕ್ಕ ಒಬ್ಬ ಗೃಹಲಕ್ಷ್ಮಿಗೆ-ಸಾಧ್ವಿಗೆ ಮೊದಲೇ ಎಚ್ಚರಕೊಡಬೇಕೆಂದು ಬಂದೆನು; ಆದರೆ........

ಬಳವಂತರಾಯ:—ಹಾಗಾದರೆ ಅಷ್ಟು ಕೆಲಸವನ್ನು ಯಾಕೆ ಮಾಡಲಿಲ್ಲ?

ಸ್ತ್ರೀ—ನಾನು ಬರುವದಕ್ಕೆ ಸ್ವಲ್ಪ ತಡವಾಯಿತು, ನಾನು ಬರುವದಕ್ಕಿಂತ ಮೊದಲು ಅರ್ಧತಾಸಿನಲ್ಲಿಯೇ ಈ ಭಯಂಕರವಾದ ಕೆಲಸವು ಆಗಿಹೋಗಿದೆ. ಉಪಾಯವಿಲ್ಲ, ಮಾಡುವದೇನು?

ಬಳವಂತ—ಈ ಕೆಲಸ ಮಾಡಿದವರು ಯಾರು?

ಸ್ತ್ರೀ—ಹೊಸರಾಮಪುರದ ದೇಸಾಯಿಯರು; ಮತ್ತು........

ಬಳವಂತ—ಮತ್ತೆ ಯಾರು?

ಸ್ತ್ರೀ—ಅವರ ಪಾಪಕರ್ಮದ ಪಾಲುಗಾರ್ತಿಯಾದ ಮೀನಾಕ್ಷಿ.

ಬಳವಂತ—ಮೀನಾಕ್ಷಿಯೇ? ಅವಳನ್ನು ಕೇಳಬಲ್ಲೆನು; ರಾಮಪುರದ ಗೌಳಿಗರ ಶಾರದೆಯನ್ನು ಭ್ರಷ್ಟಳನ್ನಾಗಿಮಾಡಿದ ನೀಚಳೇ? ಹಿಂದಕ್ಕೊಮ್ಮೆ ಒಂದು ನೀಚ ಕೆಲಸ ಮಾಡಿದ್ದರ ಸಲುವಾಗಿ ನಾನು ಅವಳನ್ನು ಅಪಮಾನಮಾಡಿ ಹೊರಗೆ ಹಾಕಿದ್ದೆನು.

ಸ್ತ್ರೀ—ಹೌದು. ಅಲ್ಲಿಂದ ಅವಳು ಹೊಸರಾಮಪುರದಲ್ಲಿಯೇ ಇರಹತ್ತಿರುವಳು; ಮತ್ತು ನಾನೇ ನಿರ್ಭಾಗ್ಯಳೂ, ಪಾಪಿಷ್ಠಳೂ ಆದ ಗೌಳಿಗರ ಕೃಷ್ಣಪ್ಪನ ಮಗಳು ಶಾರದಾ; ಆ ರಾಕ್ಷಸಿಯ ಮಾತಿಗೆ ಮರುಳಾಗಿ ವಿಚಾರಮಾಡದೆ,

ಗೋವಿಂದರಾಯರ ವಿಲಾಸದ ದಾಸಿಯಾಗಿ, ಹೆಂಗಸರಿಗೆ ಮುಖ್ಯವಾದ ಪಾತಿವ್ರತ್ಯವನ್ನು ಹಾಳುಮಾಡಿಕೊಂಡೆನು; ಕಡೆಗೆ ಈಗ ಅನಾಥಳಾಗಿರುವೆನು.

ಬಳವಂತ—ತಿಳಿಯಿತು; ಎಲ್ಲವೂ ತಿಳಿಯಿತು. ನಿನ್ನನ್ನು ಈಗ ನಿಮ್ಮ ದೇಸಾಯಿಯರು ಬಿಟ್ಟಿರುವರೇನು?

ಶಾರದೆ—ಹೌದು.

ಬಳವಂತ—ಹಾಗಾದರೆ ಈಗ ನೀನು ಎಲ್ಲಿರುವಿ?

ಶಾರದೆ—ಮೀನಾಕ್ಷಿಯ ಮನೆಯಲ್ಲಿಯೇ ಇರುವೆನು.

ಬಳವಂತ—ಅವಳ ಮನೆಯಲ್ಲಿದ್ದು, ಅವಳ ಅಹಿತವನ್ನೇಕೆ ಚಿಂತಿಸುವಿ?

ಶಾರದೆ—ಅವಳು ನನಗೆ ಮಾಡಿದ ಕೇಡಿಗೆ ಅಳತೆಯೇ ಇಲ್ಲ. ನಾನು ಸೇಡು ತೀರಿಸಿಕೊಳ್ಳುವ ಹವ್ಯಾಸದಲ್ಲಿರುವೆನು. ಇದಲ್ಲದೆ, ಒಬ್ಬ ಸಾಧ್ವಿಯ ಪಾತಿವ್ರತ್ಯ ರಕ್ಷಣೆಮಾಡಿ, ನನ್ನ ಪಾಪದ ಸ್ವಲ್ಪ ಅಂಶವನ್ನಾದರೂ ಕಡಿಮೆ ಮಾಡಿಕೊಳ್ಳಬೇಕೆಂದು ಮಾಡಿದೆನು. ಮಾಡುವದೇನು? ಸಾಧ್ಯವಾಗಲಿಲ್ಲ.

ಬಳವಂತ—ಈಗ ಮೀನಾಕ್ಷಿಯು ಎಲ್ಲಿಗೆ ಹೋಗಿರುವಳು? ನಿನಗೆ ಗೊತ್ತಿರುವದೇನು?

ಶಾರದಾ—ಅವಳು ಬಹುಶಃ ಇನಾಮದಾರರ ತೋಟದಲ್ಲಿಯ ಬಂಗ್ಲೆಯಲ್ಲಿರಬಹುದು.

ಬಳವಂತ—ನೀಚನಾದ ನಿಮ್ಮ ಧನಿಯು ಈಗ ಎಲ್ಲಿರುವನು?

ಶಾರದೆ—ಅವರೂ ಬಹುತರ ಅಲ್ಲಿಯೇ ತೋಟದಲ್ಲಿ ಇರಬಹುದು.

ಬಳವಂತ—ಆ ತೋಟದಲ್ಲಿ ರಾತ್ರಿ ಎಷ್ಟು ಜನರಿರುವರು? ನಿನಗೆ ಗೊತ್ತಿರುವದೇನು?

ಶಾರದಾ—ಇಬ್ಬರು-ಮೂರು ಮಂದಿ ಆಳುಮಕ್ಕಳೂ, ಒಬ್ಬ ಕಾರಕೂನನೂ ಹೀಗೆ ೪-೫ ಮಂದಿ ಇರಬಹುದು.

ಬಳವಂತರಾಯನು ಒಂದು ಸಿಟ್ಟುಸಿರುಬಿಟ್ಟು—ಈ ಸಂಗತಿಯನ್ನು ಹೇಳಿ ನನ್ನ ಮೇಲೆ ಮಹದುಪಕಾರ ಮಾಡಿದಂತೆ ಆಯಿತು. ನಿಮ್ಮ ತಂದೆಯು ನಮ್ಮ ದೇಸಾಯಿಯರ ರೈತನು. ಅವನು ಬದುಕಿರುವನೇನು?

ಶಾರದಾ—ಇರುವ ಒಬ್ಬ ಮಗಳ ಈ ಅವಸ್ಥೆಯನ್ನು ಕಂಡು ಹುಚ್ಚು ಹಿಡಿದು ಸತ್ತನು.

ಬಳವಂತರಾಯನು ಬಸವಂತನನ್ನು ಕುರಿತು—ಈಗ ಎಲ್ಲವೂ ಪೂರ್ಣವಾಗಿ

ತಿಳಿಯಿತಷ್ಟೇ; ನನ್ನ ಮಗಳು ನಿರಾಧಾರವಾದದ್ದನ್ನು ಕಂಡು ಆ ನೀಚನು ಮೀನಾಕ್ಷಿಯ ಸಹಾಯದಿಂದ ಅವಳನ್ನು ಅಪಹರಿಸಿರುವನು. ಈ ಶಾರದೆಯು ಹೇಳಿದ ಮಾತು ನಿಜವಿದ್ದರೆ, ನಾವು ಗೋವಿಂದರಾಯರ ತೋಟಕ್ಕೆ ಒಮ್ಮೆ ಹೋಗಿಬರುವದು ಅವಶ್ಯವು.

ಶಾರದಾ—ಇಬ್ಬರೇ ಅಲ್ಲ; ಈ ಕಾರಸ್ಥಾನದಲ್ಲಿ ದೇಸಾಯಿಯರ ಗುಮಾಸ್ತನಾದ ರುದ್ರಪ್ಪನೂ ಕೂಡಿರುವನು.

ಬಳವಂತ—ಇದೆಲ್ಲ ನಿನಗೆ ಹೇಗೆ ತಿಳಿಯಿತು?

ಶಾರದಾ—ಒಂದು ದಿನ ರಾತ್ರಿ ನಾನು ಬಾಗಿಲ ಹಿಂದೆ ನಿಂತು ದೇಸಾಯಿಯರ ಮತ್ತು ಮೀನಾಕ್ಷಿಯ ಮಾತುಗಳನ್ನು ಕೇಳಿದೆನು; ಇದಲ್ಲದೆ ನಿನ್ನೆ ರಾತ್ರಿ ತೋಟದಲ್ಲಿ ರುದ್ರಪ್ಪ, ಮೀನಾಕ್ಷಿ ಮತ್ತು ದೇಸಾಯಿಯರ ನಡುವೆ ಆದ ಎಲ್ಲ ಮಾತುಗಳನ್ನೂ ಕೇಳಿದೆನು; ಆದರೆ ಇಂದು ಮಧ್ಯಾಹ್ನದಿಂದ ಅಲ್ಲಿ ಯಾರೂ ಕಾಣುವದಿಲ್ಲ.

ವಿಚಾರಮಗ್ನನಾದ ಬಸವಂತನನ್ನು ಕುರಿತು ಬಳವಂತರಾಯನು—ಏನು ವಿಚಾರ ಮಾಡಹತ್ತಿರುವಿ?

ಬಸವಂತ—ನಾನು ಈ ವಿಷಯವಾಗಿಯೇ ಆಲೋಚಿಸಹತ್ತಿರುವೆನು. ಗೋವಿಂದರಾಯರು ಇಷ್ಟೊಂದು ನೀಚಕೆಲಸಕ್ಕೆ ಹೇಗೆ ಮನಸ್ಸುಮಾಡಿರಬಹುದು?

ಬಳವಂತ—ನಿಜವಾಗಿಯೂ ಅವನು ಬಹು ನೀಚನು; ಮತ್ತು ದುರಭಿಮಾನಿಯು. ಇರಲಿ, ಒಮ್ಮೆ ನಾವು ತೋಟಕ್ಕೆ ಹೋಗಿ ನೋಡಿ ಬರಲಿಕ್ಕೆ ಏನು ಅಡ್ಡಿ ಇರುವದು?

ನಂತರ ಆ ಮೂವರೂ ತೋಟದದಾರೀ ಹಿಡಿದರು. ಆ ವೇಳೆಗೆ ಮೋಡವು ಹರಿದು ಆಕಾಶವು ಸ್ವಚ್ಛವಾಗಿತ್ತು. ಅವರು ಅರ್ಧತಾಸಿನಲ್ಲಿಯೇ ಆ ತೋಟದ ಹತ್ತರ ಬಂದರು. ಬಳಿಕ ಬಳವಂತರಾಯನು ಅವರಿಬ್ಬರಿಗೂ ಅಲ್ಲಿಯೇ ಒಂದು ಗಿಡದ ಬುಡಕ್ಕೆ ಕೂಡ್ರಲಿಕ್ಕೆ ಹೇಳಿ, ತಾನೊಬ್ಬನೇ ತೋಟದೊಳಗೆ ಹೋಗಲಿಕ್ಕೆ ಸಿದ್ಧನಾದನು. ಆಗ ಬಸವಂತನು—ನೀವು ಒಬ್ಬರೇ ಹೋಗಬೇಡಿರಿ. ಅವರು ನಿಮ್ಮ ಶತ್ರುಗಳು. ಮೇಲಾಗಿ ನಿಮ್ಮನ್ನು ಅವರು ಗುರ್ತಿಸಬಹುದು.

ಬಳವಂತ—ಅವರು ಎಂದೂ ನನ್ನನ್ನು ಗುರ್ತಿಸಲಾರರು. ಅವರ ಬಗ್ಗೆ ನನಗೆ ಅಂಜಿಕೆಯೂ ಇಲ್ಲ. ಯಾವನು ಪಾಪಮಾಡಿರುವನೋ ಅವನು ಶಕ್ತಿಹೀನನಾಗುವನು. ನನ್ನನ್ನು ಪ್ರತಿಬಂಧ ಮಾಡುವಷ್ಟು ಸಾಮರ್ಥ್ಯವು ಅವರಲ್ಲಿ ಒಬ್ಬ

ರಲ್ಲಿಯೂ ಇಲ್ಲ, ಎಂದು ಹೇಳಿ ತೋಟದ ಬಾಗಿಲಬಳಿಗೆ ಹೋದನು. ಬಾಗಿಲವು ಮುಚ್ಚಲ್ಪಟ್ಟಿತ್ತು. ಒಳಮಗ್ಗಲಿಗೆ ದೊಡ್ಡದೊಂದು ಕೀಲಿಹಾಕಿತ್ತು. ಆಗ ಅವನು ಗೋಡೆಯನ್ನು ಹತ್ತಿ ತೋಟದೊಳಗೆ ಪ್ರವೇಶ ಮಾಡಿದನು.

ರಾತ್ರಿಯ ಕಡೆಯ ಭಾಗವು. ತೋಟದ ಕಾವಲುಗಾರರು ಪೂರ್ಣ ನಿದ್ರಾ ವಶರಾಗಿದ್ದರು. ಅದರಲ್ಲಿ ಅಂದಿನ ದಿವಸ ದೇಸಾಯರೂ ಇದ್ದಿಲ್ಲ; ಅಂದಬಳಿಕ ಕೇಳುವದೇನು? ಬಳವಂತರಾಯನು ಹಾಗೇ ಮುಂದೆ ಬಂದನು. ಮುಂದಿನ ಪಡಸಾಲೆಯಲ್ಲಿ ಕಾರಕೂನ ಭೀಮರಾಯನು ಮಲಗಿದ್ದನು. ಅವನು ಶಾರದೆಯ ಮೇಲೆ ಮೋಹಿತನಾಗಿದ್ದನು. ದೇಸಾಯಿಯರು ಶಾರದೆಯನ್ನು ಬಿಟ್ಟ ಸುದ್ದಿ ಯೂ ಗೊತ್ತಾಗಿತ್ತು. ಆಗ ಅವನು ತಾನೇ ಅವಳಿಗೆ ಗತಿಯೆಂದು ಯಾವಾಗಲೂ ಭಾವೀ ಸುಖ-ಸ್ವಪ್ನದಲ್ಲಿಯೇ ಮಗ್ನನಾಗುತ್ತಿದ್ದನು. ಇಂದಿನ ದಿವಸ ಅವನಿಗೆ ಕನಸು ಬಿದ್ದಿತ್ತು. ಕನಸಿನಲ್ಲಿಯೇ ಅವನು—ಶಾರದೆ! ಬಂದೆಯಾ, ಬಾ; ಇಲ್ಲಿ ಕೂಡು, ಎಂದು ಮಲಗಿದಲ್ಲಿಯೇ ಕೈ ಚಾಚಿದನು.

ಇದೇ ಹೊತ್ತಿನಲ್ಲಿ ಬಳವಂತರಾಯನು ಅಲ್ಲಿಗೆ ಬಂದನು. ಅವನು ಇವನ ಬಡಬಡಿಕೆಯನ್ನು ಕೇಳಿ—"ನೀನು ಯಾರನ್ನು ಕರೆಯುತ್ತೀಯೋ ಅವರು ಬಂದಿಲ್ಲ. ನಾನು ಬಂದಿರುತ್ತೇನೆ. ಒಮ್ಮೆ ಕಣ್ಣು ತೆಗೆದು ನೋಡು."

ಭೀಮರಾಯನು ಅವಸರದಿಂದ ಕಣ್ಣು ಒರಿಸಿಕೊಳ್ಳುತ್ತ ಎದ್ದು ಕುಳಿತನು. ಭಸ್ಮ-ರುದ್ರಾಕ್ಷಿಗಳನ್ನು ಧರಿಸಿದ ಭವ್ಯವಾದ ಸಂನ್ಯಾಸಿಯು ಎದುರಿಗೆ ನಿಂತಿದ್ದನು. ಸಂನ್ಯಾಸಿಯ ಎರಡೂ ಕಣ್ಣುಗಳು ಕೆಂಪಾಗಿದ್ದವು. ಭೀಮ ರಾಯನಿಗೆ ಅಂಜಿಕೆ ಹುಟ್ಟಿತು. ಆಗ ಅವನು ಎದ್ದು ಸಂನ್ಯಾಸಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ—ಸ್ವಾಮಿ, ನೀವು ಯಾರು? ಇಷ್ಟು ರಾತ್ರಿಯಲ್ಲಿ ಇಲ್ಲಿಗೇಕೆ ಬಂದಿರಿ?

ಸಂನ್ಯಾಸಿಯು ಗಟ್ಟಿಯಾಗಿ—ನಾನು ದೇಸಾಯಿಯರಾದ ಗೋವಿಂದ ರಾಯರ ಭೆಟ್ಟಿಯ ಸಲುವಾಗಿ ಬಂದಿರುವೆನು.

ಭೀಮ—ಇಷ್ಟು ರಾತ್ರಿಯಲ್ಲಿಯೇ?

ಸಂನ್ಯಾಸಿ—ಹೌದು. ಅವನು ಸದ್ಯಕ್ಕೆ ಒಂದು ಭಯಂಕರವಾದ ನೀಚ ಕೆಲಸಕ್ಕೆ ತೊಡಗಿರುವನು. ನಾನು ಅವನನ್ನು ಆ ಕೆಟ್ಟ ಕೆಲಸದಿಂದ ಬಿಡಿಸಲಿಕ್ಕೆ ಬಂದಿರುವೆನು. ಯಾಕೆಂದರೆ ಅವನ ಹಿತದ ಕಡೆಗೆ ನನ್ನ ಲಕ್ಷವು ಇರುವದು.

ಭೀಮರಾಯನಿಗೆ ಗುಪ್ತಕಾರಸ್ಥಾನದ ಎಲ್ಲ ಸಂಗತಿಗಳೂ ಗೊತ್ತಿದ್ದವು. ಆದ್ದರಿಂದ ಅವನು ಆಶ್ಚರ್ಯಭರಿತನಾದನು. ಆದರೂ ಅದನ್ನು ತೋರಗೊಡದೆ—"ಅವನು ಇಲ್ಲಿ ಇಲ್ಲ" ಎಂದನು.

ಸಂನ್ಯಾಸಿ—ಹಾಗಾದರೆ ಎಲ್ಲಿ ಹೋಗಿರುವರು?

ಭೀಮ—"ನನಗೆ ಗೊತ್ತಿಲ್ಲ" ಎಂದನು. ಅವನು ಮನಸ್ಸಿನಲ್ಲಿ—ಈ ಸಂನ್ಯಾಸಿಗೆ ಯಾವುದನ್ನೂ ತಿಳಿಸಬಾರದು. ಇದರಲ್ಲಿ ಏನೋ ಮೋಸ ಕಾಣುತ್ತದೆ, ಎಂದು ನಿರ್ಧಾರ ಮಾಡಿಕೊಂಡನು.

ಅವನು ಹಿಂದುಮುಂದೆ ನೋಡಲಿಕ್ಕೆ ಹತ್ತಿದ್ದನ್ನು ಕಂಡು ಸಂನ್ಯಾಸಿಯು—ನೀನು ನನ್ನ ಹತ್ತರ ಮುಚ್ಚಿಡಬೇಡ. ನೀನು ಯಾರೆಂಬದನ್ನು ಮೊದಲು ಹೇಳು.

ಭೀಮ—ನಾನು ದೇಸಾಯಿಯರ ಗುಮಾಸ್ತನು; ನನ್ನ ಹೆಸರು ಭೀಮರಾಯ.

ಸಂನ್ಯಾಸಿ—ಖರೇ ಹೇಳು, ನಿಮ್ಮ ಧನಿಯು ಈಗ ಎಲ್ಲಿರುವನು?

ಭೀಮ—ಈ ತೋಟದಲ್ಲಿ ಇಲ್ಲೆಂದು ನಾನು ಮೊದಲೇ ಹೇಳಿರುವೆನಲ್ಲ.

ಸಂನ್ಯಾಸಿ—ನೀನು ದೇಸಾಯಿಯರ ವಿಶ್ವಾಸಿಕ ಸೇವಕನು; ಅವರು ಎಲ್ಲಿರುವರೆಂಬದು ನಿನಗೆ ಗೊತ್ತಿದೆ, ಹೇಳು.

ಭೀಮರಾಯ—ಸಂನ್ಯಾಸಿಯ ಆಗ್ರಹದ ಮಾತುಗಳನ್ನು ಕೇಳಿ ಇವನು ತನ್ನ ಯಜಮಾನನ ಶತ್ರುಪಕ್ಷದವನೆಂದು ತಿಳಕೊಂಡನು. ಸಂನ್ಯಾಸಿಯೂ ಇವನ ಮಾತಿನ ಧೋರಣ ತಿಳಿದು, ಈ ಬದಮಾಷನ ಸಂಗಡ ಸೌಮ್ಯರೀತಿಯಿಂದ ವರ್ತಿಸಿದರೆ ಕೆಲಸವಾಗುವದಿಲ್ಲ. ದುಷ್ಟರ ಸಂಗಡ ದುಷ್ಟತನದಿಂದಲೇ ನಡೆಯಬೇಕೆಂದು ನಿರ್ಧರಿಸಿ, ಗಟ್ಟಿಯಾಗಿ ಕರ್ಕಶಸ್ವರದಿಂದ—"ನೋಡು. ನೀನು ನಿಜಸಂಗತಿ ಹೇಳದಿದ್ದರೆ ಕಷ್ಟಕ್ಕೊಳಗಾಗುವಿ" ಎಂದನು.

ಭೀಮರಾಯ—ನಾನು ಹೇಳದಿದ್ದರೆ ನೀವು ಮಾಡುವದಾದರೂ ಏನು?

ಸಂನ್ಯಾಸಿ—ನಾನು ಮಾಡುವದೇ? ನೋಡು, ಎಂದು ಬಲಗೈಯಿಂದ ಅವನ ಕುತ್ತಿಗೆಯನ್ನು ಗಟ್ಟಿಯಾಗಿ ಹಿಡಿದು ತಲೆಯನ್ನು ಬಗ್ಗಿಸಿದನು. ಆಗ ಭೀಮರಾಯನಿಗೆ ಉಸಿರುಗಟ್ಟಲಿಕ್ಕೆ ಹತ್ತಿತು. ಸಂನ್ಯಾಸಿಯು ಮತ್ತೆ ಭೀಮರಾಯನನ್ನು ಕುರಿತು—ತಿಳಿಯಿತೇ? ನನ್ನ ಸಾಮರ್ಥ್ಯವು ಎಷ್ಟಿರುವದೆಂಬದು, ಎಂದನು.

ಭೀಮರಾಯನು ದೀನಸ್ವರದಿಂದ—ನನ್ನ ಕುತ್ತಿಗೆಯನ್ನು ಬಿಡಿರಿ, ಸಂಕಟವಾಗ ಹತ್ತಿದೆ. ನೀವು ಕೇಳಿದ್ದನ್ನು ಹೇಳುವೆನು.

ಸಂನ್ಯಾಸಿಯು ಕೈಯನ್ನು ಬಿಟ್ಟು—ಹಾಗಾದರೆ ನಿಮ್ಮ ಧನಿ ಎಲ್ಲಿರುವನು?

ಭೀಮರಾಯ—ಅವರು ರಾತ್ರಿ ಎಂಟು-ಒಂಬತ್ತರ ಸುಮಾರಿಗೆ ಗದಗಿಗೆ ಹೋಗುತ್ತೇವೆಂದು ನನ್ನ ಮುಂದೆ ಹೇಳಿದರು; ಆದರೆ ಅವರು ಗದಗಿಗೆ ಹೋದಂತೆ ಕಾಣುವದಿಲ್ಲ.

ಸಂನ್ಯಾಸಿ—ಹಾಗಾದರೆ ಅವರು ಎಲ್ಲಿ ಹೋಗಿರುವರು?

ಭೀಮರಾಯ—ಅವರು ಬಹಳಮಾಡಿ ಭೈರಾಪುರಕ್ಕೆ ಹೋಗಿರಬಹುದು.

ಸಂನ್ಯಾಸಿ—ಅಲ್ಲಿಗೆ ಮತ್ತೆ ಯಾರು ಯಾರು ಹೋಗಿರುವರು?

ಭೀಮರಾಯ—ರುದ್ರಪ್ಪನೂ, ಮೀನಾಕ್ಷಿಯೂ ಹೋಗಿರುವರು. ಸ್ವಾಮೀ, ನೀವು ಯಾರು?

ಸಂನ್ಯಾಸಿ—ನಾನು ಯಾರೇ ಆಗಲಿ, ಇನ್ನೊಮ್ಮೆ ಭೆಟ್ಟಿಯಾದಾಗ್ಗೆ ನಿನಗೆ ಎಲ್ಲ ಹೇಳುವೆನು. ಇರಲಿ. ನಿನಗೆ ಹಣ ಬೇಕಷ್ಟೇ?

ಸಾಧು-ಭೈರಾಗಿಗಳು ಬಂಗಾರ ಮುಂತಾದವುಗಳನ್ನು ಮಂತ್ರಶಕ್ತಿಯಿಂದ ಮಾಡುವರೆಂದು ಭೀಮರಾಯನು ಕೇಳಿದ್ದನು. ಆದ್ದರಿಂದ ಹಣವೆಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಅವನ ಬಾಯಲ್ಲಿ ನೀರು ಬಂದವು. ಆಗ ಅವನು ನಗುತ್ತ—ಪ್ರಭೋ, ಈ ಜಗತ್ತಿನಲ್ಲಿ ಹಣ ಬೇಡೆನ್ನುವವರು ಯಾರು?

ಸಂನ್ಯಾಸಿ—ನಿಮ್ಮ ಯಜಮಾನನು ನಿನಗೆ ಸಂಬಳವೆಷ್ಟು ಕೊಡುವನು?

ಭೀಮರಾಯ—ತಿಂಗಳಿಗೆ ಹತ್ತು ರೂಪಾಯಿ ಕೊಡುವನು.

ಸಂನ್ಯಾಸಿ—ಹಾಗಾದರೆ ನಾನು ನಿನಗೆ ಇಪ್ಪತ್ತು ರೂಪಾಯಿ ಕೊಡುವೆನು, ಎಂದು ಹೇಳಿ, ತನ್ನ ಕಫನಿಯ ಕಿಶಿಯೊಳಗಿಂದ ಹತ್ತುರೂಪಾಯಿಯ ಎರಡು ನೋಟು ತೆಗೆದು ಎಡಗೈಯಲ್ಲಿ ಹಿಡಿದು—ನಾನು ಕೇಳಿದ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡು. ಅಂದರೆ ಈ ರೂಪಾಯಿಗಳನ್ನು ನಿನಗೆ ಕೊಡುವೆನು.

ಭೀಮರಾಯ—ಕೇಳೋಣವಾಗಬೇಕು.

ಸಂನ್ಯಾಸಿ—ಭೈರಾಪುರಕ್ಕೆ ಇಂದಿನ ರಾತ್ರಿ ಒಬ್ಬ ಸ್ತ್ರೀಯನ್ನು ಅಪಹರಿಸಿಕೊಂಡು ಹೋದದ್ದು ನಿಜವೇನು?

ಭೀಮರಾಯನು ಆಶ್ಚರ್ಯದಿಂದ ಸಂನ್ಯಾಸಿಯ ಮುಖದ ಕಡೆಗೆ ನೋಡಿದನು; ಮತ್ತು ಕೂಡಲೆ ಆ ನೋಟುಗಳ ಕಡೆಗೆ ನೋಡಿ—ಇಂದಿನ

ರಾತ್ರಿಯೇ ರುದ್ರಪ್ಪನೂ, ಮೀನಾಕ್ಷಿಯೂ, ನಮ್ಮ ದೇಸಾಯಿಯರೂ ಒಬ್ಬ ಬ್ರಾಹ್ಮಣ ಸ್ತ್ರೀಯನ್ನು ಅಪಹರಿಸಬೇಕೆಂದು ಸಂಚು ಮಾಡಿದ್ದು ಮಾತ್ರ ಗೊತ್ತು ಅದೆ.

ಸಂನ್ಯಾಸಿ—ಆ ಸ್ತ್ರೀಯು ಯಾರು, ನಿನಗೆ ಗೊತ್ತು ಅದೆ ಏನು?

ಭೀಮರಾಯ—ನನಗೆ ಪರಿಚಯವಿಲ್ಲದಿದ್ದರೂ ಅವಳು ರಾಮಪುರದ ಬಳವಂತರಾಯನ ಮಗಳೆಂಬದು ಅವರ ಗುಪ್ತ ಮಾತುಗಳಿಂದ ನನಗೆ ತಿಳಿದದೆ.

ಸಂನ್ಯಾಸಿ—ಇರಬಹುದು, ಎಂದು ಹೇಳಿ ಆ ಎರಡೂ ನೋಟುಗಳನ್ನು ಭೀಮರಾಯನ ಕೈಯಲ್ಲಿ ಕೊಟ್ಟು—ನೋಡು, ಈ ರಾತ್ರಿ ನನಗೂ ನಿನಗೂ ಇಲ್ಲಿ ನಡೆದ ಮಾತಿನ ಸುದ್ದಿಯನ್ನು ಯಾರ ಮುಂದೆಯೂ ತೆಗೆಯಬೇಡ. ಇದಕ್ಕೆ ತಪ್ಪಿದರೆ ಜೀವವನ್ನು ಕಳಕೊಳ್ಳುವಿ.

ಭೀಮರಾಯ—ಮಹಾಪ್ರಭೋ, ನಾನು ನಿಮ್ಮ ಸೇವಕನು. ಯಾರ ಹಣವನ್ನು ತಿಂದಿರುವೆನೋ ಅವರಿಗೆ ಎಂದೂ ಕೆಡಕು ಮಾಡುವವನಲ್ಲ. ಈ ವಿಷಯವಾಗಿ ಎಂದೂ ಯಾರ ಮುಂದೆಯೂ ಸುದ್ದೀ ತೆಗೆಯುವದಿಲ್ಲ.

ಸಂನ್ಯಾಸಿಯು ಅಲ್ಲಿಂದ ಹೊರಟು ತೋಟದ ಹೊರಗೆ ಬಂದನು. ಇತ್ತ ಭೀಮರಾಯನು ಆ ನೋಟುಗಳು ನಿಜವಾದವೋ ಖೊಟ್ಟಿಯೋ ಎಂಬದನ್ನು ನೋಡಬೇಕೆಂದು ದೀಪದ ಬೆಳಕಿಗೆ ಹೋಗಿ ಪರೀಕ್ಷಿಸಿದನು. ಅವು ನಿಜವಾದವೆಂಬದು ಖಾತ್ರಿಯಾದನಂತರ ಮನಸ್ಸಿನಲ್ಲಿ—ಈ ಸಂನ್ಯಾಸಿಯು ದಿನಾಲು ಬಂದು ನನಗೆ ೨೦ ರೂಪಾಯಿ ಕೊಟ್ಟರೆ ಸಹಜವಾಗಿ ಶಾರದೆಯು ನನ್ನವಳಾಗುವಳು, ಎಂದು ಭಾವಿಸಹತ್ತಿದನು.

ಒಂದು ಗಿಡದ ಬುಡದಲ್ಲಿ ಬಸವಂತನೂ ಶಾರದೆಯೂ ಬಳವಂತರಾಯನ ಮಾರ್ಗನಿರೀಕ್ಷಣೆ ಮಾಡುತ್ತ ಕುಳಿತಿದ್ದರು. ಬಳವಂತರಾಯನನ್ನು ನೋಡಿದ ಕೂಡಲೆ ಬಸವಂತನು ಉತ್ಕಂಠೆಯಿಂದ—ಏನಾದರೂ ಸುದ್ದಿ ಹತ್ತಿತೇ? ಎಂದನು.

ಬಳವಂತರಾಯ—ಇಲ್ಲ; ಆ ನೀಚರು ಕಮಲೆಯನ್ನು ಅಪಹರಿಸಿಕೊಂಡು ಭೈರಾಪುರಕ್ಕೆ ಹೋಗಿರುವರು.

ಬಸವಂತ—ಬೆಳಗಾಗಲಿಕ್ಕೆ ಇನ್ನೂ ಒಂದೆರಡು ತಾಸು ಅವಕಾಶವಿದೆ. ನಡೆಯಿರಿ, ಅಲ್ಲಿಗೇ ಹೋಗೋಣ.

ಬಳವಂತ—ಬೇಡ, ನೀವು ಬರುವ ಅವಶ್ಯಕತೆ ಇಲ್ಲ. ನಾನೊಬ್ಬನೇ ಹೋಗುವೆನು.

ಬಸವಂತ—ಬೇಡಿರಿ, ಒಬ್ಬರೇ ಹೋಗಬೇಡಿರಿ; ನಾನೂ ಬರುತ್ತೇನೆ.

ಬಳವಂತ--ಬೇಡ, ಯಾರೂ ಬರುವ ಅವಶ್ಯವಿಲ್ಲ. ನೀನು ಮುಂದಿನ ಸೋಮವಾರ ರಾತ್ರಿ ಆರು ತಾಸಿಗೆ ಕಾಲಕಾಲೇಶ್ವರನ ಗುಡಿಯಲ್ಲಿ ನನಗೆ ಭೆಟ್ಟಿಯಾಗು. ತಮ್ಮಾ ಈ ಶಾರದೆಯ ಉಪಕಾರವು ನಮ್ಮ ಮೇಲೆ ಬಹಳವಾಗಿದೆ. ಇವಳನ್ನು ಮನೆಯ ತನಕ ಕಳಿಸಿ ಬಾ. ಇಲ್ಲವೆ ಇಂದು ರಾತ್ರಿ ನಿಮ್ಮ ಮನೆಗೆ ಕರಕೊಂಡು ಹೋಗು. ಬೆಳಗಾದ ಮೇಲೆ ತಮ್ಮ ಊರಿಗೆ ಹೋಗಲಿ.

ಶಾರದಾ—ಪ್ರಭೋ, ಬೇಡ ನಾನು ಒಬ್ಬಳೇ ಹೋಗುತ್ತೇನೆ. ನಿಮಗೆ ಈ ವಿಷಯದಲ್ಲಿ ನಾನೂ ಸಹಾಯ ಮಾಡುವೆನು. ಸಾಧ್ಯವಾದಷ್ಟು ಗೌಪ್ಯಸಂಗತಿ ತಿಳಕೊಂಡು ನಿಮಗೆ ತಿಳಿಸುವೆನು, ಎಂದು ಹೇಳಿ ಮನೆಯ ಹಾದೀ ಹಿಡಿದಳು.

ಇತ್ತ ಬಳವಂತರಾಯನು ಬಸವಂತನನ್ನು ಕುರಿತು—ತಮ್ಮಾ, ನೀನು ನಮ್ಮ ಮನೆಯವನಂತೆ ಇರುತ್ತೀ. ನಿನಗೊಂದು ಮಾತು ಹೇಳುತ್ತೇನೆ. ಅದೇನಂದರೆ—ಕಮಲೆಯು ಸ್ಮಶಾನದಿಂದ ತಿರುಗಿ ಬಂದಿಲ್ಲವೆಂದು ಊರೊಳಗೆ ಸುದ್ದಿ ಆದ ಕೂಡಲೆ ಜನರು ಮನಬಂದಂತೆ ಮಾತಾಡುವರು. ಕಾರಣ ನೀನು ಒಂದು ಸುದ್ದಿಯನ್ನು ಊರೊಳಗೆ ಹುಟ್ಟಿಸಬೇಕು. ಅದೇನಂದರೆ—ಮನೆಯಲ್ಲಿ ಯಾರೂ ಇಲ್ಲದಂತೆ ಆದಕಾರಣ ನಾನು ಕಮಲೆಯನ್ನು ಅವರ ಅಬಚಿಯ ಮನೆಗೆ ಕಳುಹಿಸಿದೆನೆಂದು ಎಲ್ಲರ ಮುಂದೆ ಹೇಳು.

ಬಸವಂತನು ಒಪ್ಪಿಕೊಂಡನು. ಸ್ಮಶಾನಭೂಮಿಯಲ್ಲಿ ಬ್ರಾಹ್ಮಣರು ಸಂನ್ಯಾಸಿಯನ್ನು ನೋಡಿ ಭೂತವೆಂದು ಓಡಿ ಹೋದದ್ದು ಬಸವಂತನಿಗೆ ಗೊತ್ತಿದ್ದಿಲ್ಲ.

ಮುಂದೆ ಕೆಲಹೊತ್ತಿನ ಮೇಲೆ ಬಳವಂತರಾಯನು ಬಸವಂತನನ್ನು ಕುರಿತು—ಭುಜಂಗರಾಯರ ಮುಂದೆ ನಾನು ಜೀವಂತವಿದ್ದ ಸಂಗತಿಯನ್ನು ಗುಪ್ತವಾಗಿ ತಿಳಿಸು; ಆದರೆ ಈ ಬಗ್ಗೆ ಅವರು ಯೋಗ್ಯ ಸಮಯವು ಪ್ರಾಪ್ತವಾಗುವವರೆಗೆ ಯಾರ ಮುಂದೆಯೂ ಸುದ್ದೀ ತೆಗೆಯಬಾರದೆಂದು ತಿಳಿಸು. ಕೆಲವು ದಿವಸಗಳವರೆಗೆ ನಾನು ಅಜ್ಞಾತವಾಸದಲ್ಲಿಯೇ ಇರಬೇಕಾಗಿದೆ.

ಬಸವಂತನು ಬಳವಂತರಾಯನಿಗೆ ನಮಸ್ಕಾರಮಾಡಿ, ಆಶೀರ್ವಾದ ಪಡಕೊಂಡು, ಅಲ್ಲಿಂದ ಹೊರಟನು.

# [ ೧೫ ]

ಶ್ರೀನಿವಾಸದೀಕ್ಷಿತರೂ ಉಳಿದವರೂ ಅಂಜಿ ರಾತ್ರಿ ಸ್ಮಶಾನಭೂಮಿಯಿಂದ ಊರಹಾದೀ ಹಿಡಿದರು. ದೀಕ್ಷಿತರ ಮನಸ್ಸಿನಲ್ಲಿ ಅನೇಕ ವಿಚಾರಗಳು ಹುಟ್ಟಹತ್ತಿದವು. ಅವರು ಮನಸ್ಸಿನಲ್ಲಿ—ಸಾಧು-ಸಂನ್ಯಾಸಿಗಳು ರಾತ್ರಿ ಸ್ಮಶಾನ ಭೂಮಿಯಲ್ಲಿ ಸಂಚಾರ ಮಾಡುತ್ತಿರುತ್ತಾರೆಂದು ಹಲವು ಸಾರೆ ಕೇಳಿರುವೆನು. ಅಂದ ಮೇಲೆ ನಾವು ನೋಡಿದವನು, ಒಬ್ಬ ಸಂನ್ಯಾಸಿಯಾಗಿರಲಿಕ್ಕೆ ಬೇಕು. ಸಣ್ಣ ಹುಡುಗರ ಮಾತು ಕೇಳಿ ನಾನೂ ತಿರುಗಿ ಬಂದದ್ದು ಅನ್ಯಾಯವು. ಇನ್ನು ದೇಸಾಯರ ಮುಂದೆ ಏನು ಹೇಳಬೇಕು? ಎಂದು ವಿಚಾರ ಮಾಡಹತ್ತಿ ದನು. ಉಳಿದವರೂ ಆ ಒಗ್ಗೆ ವಿಚಾರ ಮಾಡಹತ್ತಿದರು. ಕಡೆಗೆ ಈಗ ದೇಸಾಯಿಯರಿಗೆ ಭೆಟ್ಟಿಯಾಗದೆ ಮರುದಿವಸ ಮುಂಜಾನೆ ಭೆಟ್ಟಿಯಾಗಬೇಕೆಂದು ನಿರ್ಧರಿಸಿಕೊಂಡರು.

ಮರುದಿವಸ ಭುಜಂಗರಾಯನು ನಸುಕಿನಲ್ಲಿಯೇ ಎದ್ದು ದಿವಾಣಖಾನೆಗೆ ಬಂದನು. ಯಾಕಂದರೆ ಹಿಂದಿನ ರಾತ್ರಿಯಲ್ಲಿ ಬಳವಂತರಾಯನ ಕುಟುಂಬದ ದಹನವ್ಯವಸ್ಥೆ ಮಾಡುವದರೊಳಗೆ ರಾತ್ರಿ ಬಹಳವಾಯಿತು; ಮತ್ತು ನಿದ್ದೆಯೂ ಚೆನ್ನಾಗಿ ಹತ್ತಲಿಲ್ಲ. ಇದಲ್ಲದೆ ಎಲ್ಲ ಕೆಲಸವು ಸುರಳೀತ ಸಾಗಿದ್ದನ್ನು ತಿಳಕೊಳ್ಳುವ ಲವಲವಿಕೆಯೂ ಇತ್ತು. ಕಾರಣ ಪ್ರತಿದಿವಸಕ್ಕಿಂತ ಬೇಗನೆ ದಿವಾಣಖಾನೆಗೆ ಬಂದನು. ದಿವಾಣಖಾನೆಯಲ್ಲಿ ಬಂದು ಆರಾಮಿಖುರ್ಚಿಯ ಮೇಲೆ ಕುಳಿತು "ಕ್ರಾನಿಕಲ್" ಪತ್ರವನ್ನು ಓದಲಿಕ್ಕೆ ಆರಂಭ ಮಾಡಿದನು. ಸುಮಾರು ಎರಡು ತಾಸು ಹೊತ್ತು ಆಯಿತು. ಆದರೂ ಯಾರೂ ಬರಲಿಲ್ಲ. ಬಸವಂತನೂ ಬರಲಿಲ್ಲ. ಬ್ರಾಹ್ಮಣರೂ ಬರಲಿಲ್ಲ. ಆಗ ಒಬ್ಬ ಮನುಷ್ಯನನ್ನು ಬಳವಂತ ರಾಯನ ಮನೆಗೆ ನೋಡಿ ಬರಲಿಕ್ಕೆ ಕಳುಹಿಸಿದನು.

ಮನುಷ್ಯನು ಹೋಗಿ ನೋಡಿ ಬಂದು—ಹುಜೂರ, ಇನ್ನೂ ಯಾರೂ ಬಂದಿಲ್ಲ. ಅವರ ಮನೆಯ ಬಾಗಿಲಿಗೆ ಕೀಲೀ ಹಾಕಿದೆ.

ಭುಜಂಗರಾಯನಿಗೆ ಆಶ್ಚರ್ಯವಾಯಿತು. ಅವನು ಕೂಡಲೆ ಶ್ರೀನಿವಾಸ ದೀಕ್ಷಿತರನ್ನು ಕರೆಯಲಿಕ್ಕೆ ಕಳುಹಿಸಿದನು; ಮತ್ತು ಅವರು ಮನೆಯಲ್ಲಿರದಿದ್ದರೆ ಸ್ಮಶಾನಭೂಮಿಯವರೆಗೆ ಹೋಗಿ ಬರಲಿಕ್ಕೆ ಸಹ ಆ ಮನುಷ್ಯನಿಗೆ ಹೇಳಿದನು.

ಇಷ್ಟರಲ್ಲಿ ಶ್ರೀನಿವಾಸದೀಕ್ಷಿತನು ಬಂದು—ಧನಿಯರೇ, ಎಂದು ಒದರಿದನು; ಭುಜಂಗರಾಯನು ಉತ್ಕಂಠೆಯಿಂದ—ದೀಕ್ಷಿತರೇ, ಎಲ್ಲವೂ ಪೂರ್ಣವಾಯಿತೇ? ಬರಲಿಕ್ಕೆ ಇಷ್ಟೇಕೆ ತಡವು?

ದೀಕ್ಷಿತರು ನಿಜಸಂಗತಿಯನ್ನು ಮುಚ್ಚಿಡಬೇಕೆಂದು ಮಾಡಿದ್ದರು. ದೇಸಾಯಿಯರ ಮುಖವನ್ನು ನೋಡಿ ಸುಳ್ಳು ಹೇಳುವ ಧೈರ್ಯವಾಗಲಿಲ್ಲ. ಆಗ ಅವರು ಹತ್ತರ ಇರುವ ಒಂದು ಖುರ್ಚಿಯ ಮೇಲೆ ಕುಳಿತು—ಹೇಳತಕ್ಕ ಸಂಗತಿಯು ಬಹಳವದೆ. ಅಂಜದೆ ಎಲ್ಲವನ್ನೂ ಹೇಳಲೇನು? ನೀವು ನನ್ನ ತಪ್ಪನ್ನು ಕ್ಷಮಿಸಬೇಕು.

ಭುಜಂಗರಾಯನು ದೀಕ್ಷಿತರಿಗೆ ಹಿರಿಯರಂತೆ ಮಾನ ಕೊಡುತ್ತಿದ್ದನು. ಅವರ ಮಾತು ಕೇಳಿ—ಏನು, ಆದಷ್ಟಾದರೂ ಏನು? ಏನೋ ವಿಪರೀತ ಪ್ರಸಂಗ ಒದಗಿದಂತೆ ಕಾಣುತ್ತದೆ.

ದೀಕ್ಷಿತರು ಎಲ್ಲ ಸುದ್ದಿಯನ್ನು ಹೇಳಿದರು. ಅದನ್ನು ಕೇಳಿ ಭುಜಂಗರಾಯನು—ನಿಮಗೇನೋ ಹಾಗೆ ಭ್ರಮೆಯಾಗಿದೆ. ಈ ವಿಷಯದಲ್ಲಿ ನೀವು ಬುದ್ಧಿಯನ್ನು ಕಳಕೊಂಡಿರಿ. ಆಗಲಿ, ಬಸವಂತನೂ ಕಮಲೆಯೂ ಎಲ್ಲಿಗೆ ಹೋದರು?

ದೀಕ್ಷಿತ—ಏನು, ಅವರು ಇನ್ನೂ ಬಂದಿಲ್ಲವೆ? ಎಂದರು.

ಇತ್ತ ಬಸವಂತನು ಮನೆಗೆ ಹೋಗಿ, ಎಲ್ಲ ಸಂಗತಿಯನ್ನು ತಂದೆಗೆ ತಿಳಿಸಿ ಭುಜಂಗರಾಯರ ಭೆಟ್ಟಿಗೆ ಬಂದನು. ಅವನೂ ಇದೇ ವೇಳೆಯಲ್ಲಿ ದಿವಾಣಖಾನೆಗೆ ಬಂದನು. ಬಸವಂತನನ್ನು ನೋಡಿದ ಕೂಡಲೆ ಭುಜಂಗರಾಯರು ಆತುರದಿಂದ—ಬಸವಂತಾ, ಕಮಲೆಯು ಎಲ್ಲಿರುವಳು? ಅವರ ಮನೆಗೆ ಕೀಲಿಯನ್ನು ಯಾರು ಹಾಕಿದರು.

ಬಸವಂತ—ಕೀಲಿಯನ್ನು ನಾನೇ ಹಾಕಿರುವೆನು. ಸ್ಮಶಾನದಲ್ಲಿ ಒಂದು ಭಯಂಕರ ಪ್ರಸಂಗವು ಒದಗಿತು, ಹೇಳಲಿಕ್ಕೆ ಧೈರ್ಯವಾಗಲೊಲ್ಲದು.

ಭುಜಂಗ—ಅದೇನು? ಬೇಗ ಹೇಳು, ಏನಾಯಿತು?

ಬಸವಂತ—ನೀವು ಸ್ವಲ್ಪ ಒಳಗೆ ಕೋಣೆಯೊಳಗೆ ಬರ್ರಿ. ನಾನು ಹೇಳುತ್ತೇನೆ.

ಭುಜಂಗರಾಯನು ಒಳಗಿನ ಕೋಣೆಯೊಳಗೆ ಬಸವಂತನನ್ನು ಕರಕೊಂಡು ಹೋಗಿ ಬಾಗಿಲವನ್ನು ಮುಚ್ಚಿಕೊಂಡು—ನೀನು ಇಷ್ಟು ಹೊತ್ತಿನ ವರೆಗೆ ಎಲ್ಲಿ ಇದ್ದಿ? ಕಮಲೆಯು ಎಲ್ಲಿ? ಎಂದು ಕೇಳಿದನು.

ಆಗ ಬಸವಂತನು ತಾನು ಸ್ಮಶಾನಕ್ಕೆ ಹೋದದ್ದು, ಹೊಡಿಸಿಕೊಂಡದ್ದು, ಬಳವಂತರಾಯನ ಭೆಟ್ಟಿಯಾದದ್ದು ಮುಂತಾದ ಎಲ್ಲ ಸಂಗತಿಗಳನ್ನು ಹೇಳಿದನು. ಭುಜಂಗರಾಯನು ಎಲ್ಲ ಸಂಗತಿಯನ್ನು ಪೂರ್ಣವಾಗಿ ಕೇಳಿಕೊಂಡು ಉಸಿರ್ಗ ರೆದು—ಏನು, ಗೋವಿಂದರಾಯನು ಇಷ್ಟು ಅಧಃಪಾತಕ್ಕೆ ಇಳಿದಿರುವನೇ? ಅವನು ಇಷ್ಟು ಅವಿವೇಕಿಯಾಗಿರುವನೆಂದು ತಿಳಿದಿದ್ದಿಲ್ಲ. ನಮ್ಮ ಪವಿತ್ರವಾದ ವಂಶದಲ್ಲಿ ಇಂಥ ಕುಲಕಂಟಕನು ಹುಟ್ಟಬೇಕೆ? ಮತ್ತು ಕೆಲವು ಹೊತ್ತು ವಿಚಾ ರಿಸಿ ನಾನು ಬಳವಂತರಾಯನ ಶೋಧವನ್ನು ಹಂಪಿಗೆ ಹೋಗಿ ಮಾಡಿದೆನು. ಅಲ್ಲಿ ಸತ್ತನೆಂದು ಹೇಳಿದರು. ಈ ವರೆಗೂ ಅವನ ಸುದ್ದಿಯೇ ಇಲ್ಲ. ಹೆಂಡಿರು-ಮಕ್ಕಳ ಯೋಗಕ್ಷೇಮವನ್ನು ಕೂಡ ತಕ್ಕೊಳ್ಳಲಿಲ್ಲ. ಗುಪ್ತವಾಗಿ ನನಗೆ ಒಂದು ಪತ್ರ ವನ್ನಾದರೂ ಬರೆಯಬೇಕಾಗಿತ್ತು. ಇದೆಲ್ಲ ವಿಚಾರಮಾಡಿ ಆತನು ಮರಣ ಹೊಂದಿ ದ್ದು ನಿಜವೆಂದು ನಾನು ನಂಬಿದ್ದೆನು. ಅವನ ಹೆಂಡತಿಯುಕೂಡ ಸಾಯುವವರೆಗೆ ವಿಧವೆಯಂತೆ ಆಚರಿಸಿದಳು. ಇದು ವಿಚಿತ್ರ ಸಂಗತಿಯೇ ಸರಿ! ನಾನೂ ಸೋಮ ವಾರ ನಿನ್ನ ಸಂಗಡ ಬಳವಂತರಾಯನಿಗೆ ಗುಪ್ತವಾಗಿ ಭೆಟ್ಟಿಯಾಗಲಿಕ್ಕೆ ಬರುವೆನು ನಾನು ಪ್ರತ್ಯಕ್ಷ ನೋಡುವ ವರೆಗೂ ನನಗೆ ನಂಬಿಗೆ ಹುಟ್ಟುವದಿಲ್ಲ.

ಬಸವಂತ—ಧನಿಯರೇ, ನನ್ನ ಮಾತಿನ ಮೇಲೆ ವಿಶ್ವಾಸವಿಡಬೇಕು. ಆ ಸಂನ್ಯಾಸಿಯು ನಿಜವಾಗಿಯೂ ಬಳವಂತರಾಯನು.

ಭುಜಂಗ—ಇರಲಿ; ಕಮಲೆಯ ಉದ್ಧಾರದ ಸಲುವಾಗಿ ಮುಂದೆ ಏನು ಮಾಡಬೇಕು. ನಾನು ೨೦-೨೫ ಜನರನ್ನು ಕರಕೊಂಡು ಹೋಗಿ ಅವಳನ್ನು ಬಿಡಿಸಿಕೊಂಡು ಬರುವೆನು.

ಬಸವಂತ—ಹುಜೂರ, ನಾನು ನಿಮ್ಮ ಸೇವಕನು. ನಿಮಗೆ ಹೇಳುವಂಥ ಯೋಗ್ಯತೆಯೂ ನನ್ನದಲ್ಲ. ಆದರೂ ಬಳವಂತರಾಯನ ಭೆಟ್ಟಿಯಾಗುವ ವರೆಗೆ ನಾವು ಏನೂ ಕಾರ್ಯ ಮಾಡಬಾರದು. ಅವರು ಏನು ಬೇತು ಮಾಡಿರುವರೋ ಏನೋ ನಾವು ಅವಸರ ಮಾಡುವದರಿಂದ ಕೆಲಸವು ಕೆಟ್ಟುಹೋಗುವ ಸಂಭವವದೆ.

ಬಸವಂತನ ಮಾತು ಯೋಗ್ಯವೆಂದು ಭುಜಂಗರಾಯನಿಗೆ ತಿಳಿಯಿತು. ಆಗ ಅವನು ಬಸವಂತನನ್ನು ಕುರಿತು—ನೀನು ಕೆಲವು ದಿವಸ ರಾತ್ರಿ ಬಳವಂತರಾ ಯನ ಮನೆಯಲ್ಲಿಯೇ ಮಲಗಬೇಕು. ಹಗಲು ಬಾಗಿಲಿಗೆ ಕೀಲಿ ಹಾಕಿ ಬಿಡು; ಮತ್ತು ರಾತ್ರಿ ಈ ಮಲ್ಲಪ್ಪನನ್ನು ಸಂಗಡ ಮಲಗಲಿಕ್ಕೆ ಕರಕೊಂಡು ಹೋಗು. ಮತ್ತೇನಾದರೂ ವಿಶೇಷ ಸಂಗತಿ ವರ್ತಿಸಿದರೆ ನನಗೆ ಹೇಳು.

ಬಸವಂತ—ತಮ್ಮ ಅಪ್ಪಣೆಯ ಮೇರೆಗೆ ನಡೆದುಕೊಳ್ಳುವೆನು.

ಭುಜಂಗರಾಯನು ಹೊರಗೆ ಬಂದು ದೀಕ್ಷಿತರನ್ನು ಕುರಿತು—ದೀಕ್ಷಿತರೇ, ನಿಮ್ಮನ್ನು ಯಾರಾದರೂ ಕಮಲೆಯ ಬಗ್ಗೆ ಪ್ರಶ್ನೆ ಮಾಡಿದರೆ ಅವಳನ್ನು ಕುಷ್ಟಿಗಿಗೆ ಅವರ ಅಬಚಿಯ ಮನೆಗೆ ಕಳಿಸಿದೆವೆಂದು ಹೇಳಿರಿ; ನೀವು ಹಿರಿಯರು; ಜನರು ನಿಮ್ಮ ಮಾತಿನ ಮೇಲೆ ವಿಶ್ವಾಸವಿಡುವರು. ನಿನ್ನೆ ಸ್ಮಶಾನದಲ್ಲಿ ಒದಗಿದ ಭಯಂಕರ ವ್ಯಾಪಾರದಿಂದ ಅವಳಿಗೆ ಜ್ವರ ಬಂದವು. ಕಾರಣ ಅವಳನ್ನು ಅವಳ ಅಬಚಿಯ ಮನೆಗೆ ಕಳಿಸುವ ವ್ಯವಸ್ಥೆ ಮಾಡಿದೆವು. ಜನರಿಗೆ ನೀವು ಅದೇಪ್ರಕಾರ ಹೇಳಿರಿ. ಅದಕ್ಕೆ ದೀಕ್ಷಿತರು ಒಪ್ಪಿಕೊಂಡು ಹೋದರು.

## [ ೧೬ ]

ಭೈರವಪುರವು ಒಂದು ಹಳ್ಳಿಯು; ಅಲ್ಲಿ ೬೦-೭೦ ಮನೆಗಳು ಮಾತ್ರ ಇದ್ದವು. ಊರಮುಂದೆ ತುಂಗಭದ್ರಾನದಿಯು ಹರಿಯುತ್ತಿತ್ತು. ಈ ಗ್ರಾಮದಲ್ಲಿ ಗೋವಿಂದರಾಯನ ಜಮೀನುಗಳು ಬಹಳ ಇದ್ದವು; ಮತ್ತು ಒಂದು ತೋಟವೂ ಇತ್ತು. ಭುಜಂಗರಾಯನ ಹೊಲಗಳು ಮಾತ್ರ ಇಲ್ಲಿ ಎರಡು-ಮೂರೇ ಇದ್ದವು.

ರುದ್ರಪ್ಪನು ಯಜಮಾನನ ಅಪ್ಪಣೆಯ ಮೇರೆಗೆ ಕ್ಲೋರೋಫಾರ್ಮ ವಾಸನೆಯಿಂದ ಕಮಲೆಗೆ ಎಚ್ಚರದಪ್ಪಿಸಿ ಅವಳನ್ನು ಇಲ್ಲಿಗೆ ತೆಗೆದುಕೊಂಡು ಬಂದನು. ತೋಟದಲ್ಲಿ ದೇಸಾಯರ ಒಂದು ಮನೆ ಇತ್ತು. ಆ ಮನೆಯ ಒಂದು ಕೋಣೆಯಲ್ಲಿ ಕಮಲೆಯನ್ನು ಮಲಗಿಸಿದರು. ಇಷ್ಟಾದರೂ ಅವಳಿಗೆ ಎಚ್ಚರಿಕೆಯು ಹುಟ್ಟಿದ್ದಿಲ್ಲ. ನಂತರ ರುದ್ರಪ್ಪನು ಮೀನಾಕ್ಷಿಯನ್ನು ಕುರಿತು—ನೀನು ಇಲ್ಲಿಯೇ ಕುಳಿತಿರು. ನಾನು ಒಮ್ಮೆ ದೇಸಾಯಿಯರನ್ನು ಭೆಟ್ಟಿಯಾಗಿ ಬರುವೆನು, ಎಂದನು.

ಮೀನಾಕ್ಷಿ—ರುದ್ರಪ್ಪಾ, ದಾರಿಯಲ್ಲಿ ಇವಳು ಎರಡು-ಮೂರು ಸಾರೆ ಕೈ-ಕಾಲು ಅಲ್ಲಾಡಿಸಿದಳು. ಈಗ ಮಾತ್ರ ನಿಶ್ಚೇಷ್ಟಿತಳಾಗಿದ್ದಾಳೆ. ನೀನು ಆ ಔಷಧದ ವಾಸನೆಯನ್ನು ಇವಳಿಗೆ ಬಹಳ ತೋರಿಸಿದಂತೆ ಕಾಣುತ್ತದೆ. ಯಾಕೋ ನನಗೆ ಅಂಜಿಕೆ ಬರಹತ್ತಿದೆ.

ನಡುವೆ ದಾರಿಯಲ್ಲಿಯೇ ಎಚ್ಚರವಾದೀತೆಂದು ರುದ್ರಪ್ಪನು ಔಷಧವನ್ನು ಹೆಚ್ಚಾಗಿ ಉಪಯೋಗಿಸಿದ್ದು ನಿಜವು. ಆದ್ದರಿಂದ ಅವನ ಮನಸ್ಸಿನಲ್ಲಿಯೂ ಒಂದು ಪ್ರಕಾರದ ಭೀತಿಯುಂಟಾಯಿತು. ಆದರೂ ಅದನ್ನು ತೋರಗೊಡದೆ—ನಿಲ್ಲು, ನಾನು ನೋಡುತ್ತೇನೆ, ಎಂದು ಅವಳ ಮೂಗಿನ ಹತ್ತರ ಕೈಹಿಡಿದು—ಇನ್ನೂ ಶ್ವಾಸೋಚ್ಛ್ವಾಸವು ಮೃದುವಾಗಿ ನಡೆದದೆ; ನನಗೂ ಅಂಜಿಕೆ ಬರಹತ್ತಿದೆ. ಏನಾದರೂ ವಿಪರೀತ ಪ್ರಸಂಗ ಒದಗಿದರೆ ಏನು ಗತಿ?

ಮೀನಾಕ್ಷಿ—ರುದ್ರಪ್ಪ, ನಾವು ಮಾಡಿದ್ದೊಂದು ಆದದ್ದೊಂದು; ಇದಕ್ಕೆ ಮುಂದೆ ಉಪಾಯವೇನು? ನಮ್ಮ ಕೆಲಸವನ್ನು ನಾವು ಮಾಡಿರುವೆವು. ಇನ್ನು ಮುಂದಿನ ಕೆಲಸ ದೇಸಾಯಿಯದು. ಅವರು ಬೇಕಾದದ್ದನ್ನು ಮಾಡಿಕೊಳ್ಳಲಿ.

ರುದ್ರಪ್ಪ—ನೀನು ಬಲು ಬುದ್ಧಿವಂತೆ. ನಮ್ಮ ಧನಿಯು ಪ್ರತ್ಯಕ್ಷ ಸೈತಾನನು. ಈ ಬಗ್ಗೆ ಏನಾದರೂ ಗದ್ದಲವಾದರೆ, ತಾನು ಪಾರಾಗಿ ಹೋಗುವನು.. ನಾನು ಮತ್ತು ನೀನು ಫಾಶೀ ಶಿಕ್ಷೆಗೆ ಗುರಿಯಾಗಬೇಕಾದೀತು.

ಶಿಕ್ಷೆಯ ಹೆಸರು ಕೇಳಿದ ಕೂಡಲೆ ಮೀನಾಕ್ಷಿಯು ಗಾಬರಿಯಾಗಿ—ಇದೇನು ದಿವಾಣರೇ, ಖೂನಿಯ ಆರೋಪವು ನಮ್ಮ ಮೇಲೆ ಬರುವದೇ? ನಾನು ಹೆಂಗಸು, ಮುಂದೇನು ಗತಿ? ನಡೆಯಿರಿ; ನಾವು ಈಗಿಂದೀಗ ಹೊರಟು ಹೋಗೋಣ; ಇಲ್ಲಿ ಇರುವದು ಬೇಡ.

ರುದ್ರಪ್ಪ—ನಮ್ಮ ಒಡೆಯನ ಕಣ್ಣು ತಪ್ಪಿಸಿಕೊಂಡರೂ, ಪೋಲೀಸರ ಕಣ್ಣು ತಪ್ಪಿಸುವದು ಅಸಾಧ್ಯವು. ಇರಲಿ. ಈಗ ಒಂದು ಕೆಲಸ ಮಾಡುವಿಯಾ?

ಮೀನಾಕ್ಷಿ—ಅದೇನು?

ರುದ್ರಪ್ಪ—ನಿಮ್ಮ ಧನಿಯರಿಗೆ ನಿದ್ದೆ ಹತ್ತಿರುವದು. ಅವರನ್ನು ಈಗ ಎಬ್ಬಿಸಬೇಕು.

ಮೀನಾಕ್ಷಿಯು ಹೂ, ಎಂದು ಗೋವಿಂದರಾಯನು ಮಲಗಿದ ಕೋಣೆಯೊಳಗೆ ಹೋದಳು. ಅಲ್ಲಿ ಮೇಜಿನ ಮೇಲೆ ಒಂದು ಕಂಚಿನ ಬಟ್ಟಲವಿತ್ತು. ಮೀನಾಕ್ಷಿಯ ಸೆರಗು ತಾಕಿ ಅದು ನೆಲಕ್ಕೆ ಬಿತ್ತು. ಅದರಿಂದ ಝಣ ಝಣ ಎಂದು ಸಪ್ಪಳವಾಯಿತು. ಇದರಿಂದ ಸಹಜವಾಗಿ ಗೋವಿಂದರಾಯನ ನಿದ್ರಾಭಂಗವು ಆಯಿತು. ಆಗ ಅವನು ಕಣ್ಣು ಒರೆಸಿಕೊಳ್ಳುತ್ತ ಎದ್ದು ಕುಳಿತು ಯಾರವರು? ಎಂದನು.

ಮೀನಾಕ್ಷಿಯನ್ನು ನೋಡಿದಕೂಡಲೆ ಆತುರದಿಂದ—ಮೀನಾಕ್ಷೀ, ಕೆಲಸ ವೇನಾಯಿತು? ನಿನ್ನ ಮುಖವು ಇಷ್ಟೇಕೆ ಬಾಡಿದೆ? ನೀವು ಯಾವಾಗ ಬಂದಿರಿ?

ಇಷ್ಟೆಲ್ಲ ಪ್ರಶ್ನೆಗೆ ಒಂದೇ ಉತ್ತರ ಕೊಡುವದು ಅಸಾಧ್ಯವೆಂದು ತಿಳಿದು ಮೀನಾಕ್ಷಿಯು ಎಲ್ಲ ಸಂಗತಿಗಳನ್ನು ತಿಳಿಸಿದಳು. ಎಲ್ಲವನ್ನೂ ಕೇಳಿ ಸಿಟ್ಟಿನಿಂದ— ನಿಜವಾಗಿಯೂ ರುದ್ರಪ್ಪನು ಅತಿ ಸ್ಟುಪಿಡ್ ಇರುವನು. ಅವನ ತಲೆಯಲ್ಲಿ ಶಗಣಿಯು ತುಂಬಿರುವದು; ನಾನು ಒಂದೇ ಸಾರೆ ವಸ್ತ್ರದ ಸಾತ ತೋರಿಸಲಿಕ್ಕೆ ಹೇಳಿದ್ದೆನು. ಆಗಲಿ, ನಡೆ ಹೋಗೋಣ; ಎಂದು ಇಬ್ಬರೂ ಕಮಲೆಯು ಮಲಗಿದ ಕೋಣೆಗೆ ಬಂದರು.

ಶುಭ್ರವಾದ ಹಾಸಿಗೆಯ ಮೇಲೆ ಮಿಂಚಿನಂತೆ ಕಾಂತಿಯುಳ್ಳ ಬಂಗಾರದ ಗೊಂಬೆಯನ್ನು ಮಲಗಿಸಿದಂತೆ ತೋರುವ ಕಮಲೆಯ ಮುಂಗೂದಲುಗಳುಗಾಳಿಗೆ ಅತ್ತಿತ್ತ ಹಾರಾಡುತ್ತಿದ್ದವು. ಮೋಡದಲ್ಲಿ ಮುಚ್ಚಿದ ಚಂದ್ರನಂತೆ ಅವಳ ಮುಖವು ಬಾಡಿತ್ತು. ಅವಳು ಕಣ್ಣುಗಳೆರಡನ್ನೂ ಮುಚ್ಚಿದ್ದಳು; ಎದೆಯು ಸಾವಕಾಶವಾಗಿ ಹಾರುತ್ತಿತ್ತು. ಗೋವಿಂದರಾಯನು ಪಾಪಿಷ್ಠನಾದ್ದರಿಂದ ಅವಳನ್ನು ಮುಟ್ಟಲಿಕ್ಕೆ ಸಮರ್ಥನಾಗಲಿಲ್ಲ. ಮೂರ್ಛಿತಳಾದ ಅವಳ ಮುಖಲಕ್ಷಣವೂ, ಶ್ವಾಸೋಚ್ಛ್ವಸವೂ ನೋಡುವವರಿಗೆ ಸಂಶಯವನ್ನುಂಟುಮಾಡುತ್ತಿದ್ದವು.

ಗೋವಿಂದರಾಯನು ನಿಟ್ಟುಸುರು ಬಿಟ್ಟು....''ಇದು ಒಂದು ಹೊಸಸಂಕಟ ಒದಗಿತು. ಇದು ಮೊದಲೇ ಹಳ್ಳಿ; ಡಾಕ್ಟರರು ಯಾರೂ ಇಲ್ಲ. ಮುಂದೆ ಹೇಗೆ ಮಾಡಬೇಕು?'' ಎಂದು ವಿಚಾರಮಗ್ನನಾದನು.

ಅಲ್ಲಿಂದ ಒಂದು ಹರದಾರಿಯ ಮೇಲೆ ಇರುವ ಊರಲ್ಲಿ ಒಬ್ಬ ಡಾಕ್ಟರನು ಇದ್ದನು. ಅವನನ್ನು ಕರಿಸಬೇಕೆಂದು ಯೋಚಿಸಿ ಹೊರಗೆ ಬಂದನು. ನಂತರ ಪ್ರಾತರ್ವಿಧಿಯನ್ನು ತೀರಿಸಿಕೊಂಡು ಡಾಕ್ಟರನನ್ನು ಕರೆಯಲಿಕ್ಕೆ ಆಳು ಕಳಿಸಬೇಕೆಂದು ಪತ್ರಬರೆಯಲಿಕ್ಕೆ ಕುಳಿತನು. ಅಷ್ಟರಲ್ಲಿ ಮೀನಾಕ್ಷಿಯು ಅಲ್ಲಿಗೆ ಬಂದು— ಹುಜೂರ, ಮೈಮೇಲೆ ಎಚ್ಚರ ಬಂದಿದೆ; ಕಾಳಜಿ ಮಾಡಬಾರದು ಎಂದಳು.

ಕೂಡಲೆ ಗೋವಿಂದರಾಯನು ಎದ್ದು ಕಮಲೆಯು ಕೋಣೆಗೆಬಂದು ದೂರದಿಂದ ನೋಡಿ, ಒಳ್ಳೇದು; ನಾನು ಹೋಗಿ ಒಂದು ಥಾಲಿ ಹಾಲು ಕಳಿಸಿಕೊಡುವೆನು. ಅವನ್ನು ಕುಡಿಸು. ಅಂದರೆ ಸ್ವಲ್ಪ ಆರಾಮು ಆಗುವದು. ಮೀನಾಕ್ಷೀ, ಯೋಗ್ಯರೀತಿಯಿಂದ ನೀನು ಉಪಚಾರ ಮಾಡು; ಮತ್ತು ತಾಸಿಗೊಮ್ಮೆ ಬಂದು ನನಗೆ ಸುದ್ದೀ ತಿಳಿಸು, ಎಂದು ಹೇಳಿ ತನ್ನ ಕೋಣೆಗೆ ಬಂದನು.

ಗೋವಿಂದರಾಯನು ಕೋಣೆಯಲ್ಲಿ ಕುಳಿತು ಸಿಗರೇಟ ಸೇದಹತ್ತಿದನು. ಆಗ ಅವನು ಮನಸ್ಸಿನಲ್ಲಿ—ರಾಮಪುರದಲ್ಲಿ ಈ ವಿಷಯವಾಗಿ ಬಹಳ ಗೊಂದಲ ವೆದ್ದಿರಬಹುದು. ನಾನು ಮಾಡಿದ ಇಂಥ ನೀಚ ಕೆಲಸವನ್ನು ಯಾರೂ ಮಾಡಿರ ಲಿಕ್ಕಿಲ್ಲ. ಮತ್ತೆ ಮನಸ್ಸಿನಲ್ಲಿ ಏನೋ ಭಾವಿಸಿ, ಆಳು ಕರೆದು ರುದ್ರಪ್ಪನನ್ನು ಕರೆಯಲಿಕ್ಕೆ ಹೇಳಿದನು.

ಕರೆದಕೂಡಲೆ ರುದ್ರಪ್ಪನು ಬಂದು ಗರುಡನಂತೆ ಕೈಮುಗಿದುಕೊಂಡು ನಿಂತು—ಹುಜೂರ, ಏನಪ್ಪಣೆ?

ಗೋವಿಂದ—ಇನ್ನು ಇಲ್ಲಿ ನಿನ್ನ ಕೆಲಸವಿಲ್ಲ. ನೀನು ಊರಿಗೆ ಹೋಗು; ಮತ್ತು ಒಬ್ಬ ವಿಶ್ವಾಸಿಕ ಮನುಷ್ಯನನ್ನು ರಾಮಪುರಕ್ಕೆ ಕಳುಹಿಸಿ, ಅಲ್ಲಿ ಏನು ನಡೆದದೆ? ಜನರು ಏನೆನ್ನುವರು? ಮೊದಲಾದ ಎಲ್ಲ ಸಂಗತಿಗಳನ್ನು ತಿಳಕೊಂಡು ಸವಿಸ್ತಾರ ಕಾಗದ ಬರೆದು, ನನ್ನ ಹೆಸರಿನಿಂದ ರಜಿಸ್ತರ ಮಾಡು.

ರುದ್ರಪ್ಪ—ಅಪ್ಪಣೆ.

ಗೋವಿಂದ—ನಿನ್ನ ಹತ್ತರ ಹಣ ಶಿಲ್ಕು ಇರುವದಷ್ಟೇ? ಇಕೋ, ಈ ನೂರು ರೂಪಾಯಿಗಳನ್ನು ತೆಗೆದುಕೋ; ಹಣದ ಸಲುವಾಗಿ ಹಿಂದುಮುಂದೆ ನೋಡಬೇಡ. ನಾನು ದುಡ್ಡಿನ ಸಲುವಾಗಿ ಚಿಂತೆಮಾಡುವದಿಲ್ಲ; ನನ್ನ ಮಾನ-ಗೌರವಗಳು ಕಡಿಮೆಯಾಗದಂತೆ ವ್ಯವಸ್ಥೆ ಮಾತ್ರ ಆಗಲಿಕ್ಕೆ ಬೇಕು.

ರುದ್ರಪ್ಪನು ಮನಸ್ಸಿನಲ್ಲಿಯೇ—ಈ ನೀಚನು ಇಂಥ ನೀಚಕೆಲಸ ಮಾಡ ಹತ್ತಿರುವನು. ವಿಪದ್ಗ್ರಸ್ತಳೂ, ಸಹಾಯಹೀನಳೂ ಆದ ಒಬ್ಬ ಕುಲಸ್ತ್ರೀಯಳ ಪಾತಿವ್ರತ್ಯ ಭಂಗಮಾಡಲು ಹವಣಿಸುತ್ತಿದ್ದ ಈ ನೀಚನ ಮಾನ-ಗೌರವಗಳು ಬಹಳ ಬೆಲೆಯುಳ್ಳವು!'' ಎಂದು ಅಂದುಕೊಂಡು ಗಟ್ಟಿಯಾಗಿ—ತಮ್ಮ ಅಪ್ಪ ಣೆಯ ಪ್ರಕಾರ ಮಾಡುವೆನು, ಎಂದು ಹೊಸರಾಮಪುರದ ಹಾದೀ ಹಿಡಿದನು. ರುದ್ರಪ್ಪನು ಊರಿಗೆ ಹೊರಟ ಸುದ್ದಿಯು ಮೀನಾಕ್ಷಿಗೆ ಗೊತ್ತಾಗಲಿಲ್ಲ. ಯಾಕಂದರೆ ಆಕೆಯು ಕಮಲೆಯ ಉಪಚಾರದಲ್ಲಿ ತೊಡಗಿದ್ದಳು.

## [ ೧೨ ]

ಕಮಲೆಗೆ ಈಗ ಸ್ವಲ್ಪ ಮೈಮೇಲೆ ಪ್ರಜ್ಞೆಯು ಹೆಚ್ಚಾಗಹತ್ತಿತು. ಆಗ ಅವಳ ಮನಸ್ಸಿನಲ್ಲಿ ಹಿಂದಿನ ರಾತ್ರಿಯ ಎಲ್ಲ ಸಂಗತಿಗಳೂ ನೆನಪಾದವು. ಕೂಡಲೆ ಅವಳ ಮೈಯಲ್ಲಿ ನಡುಗು ಹುಟ್ಟಿತು. ಅವಳು ತನ್ನ ಹತ್ತರ ಕುಳಿತ ಮೀನಾಕ್ಷಿಯ ಕಡೆಗೆ ದೀನಭಾವದಿಂದ ನೋಡುತ್ತ—ನೀವು ನನ್ನನ್ನು ಎಲ್ಲಿಗೆ ಕರೆದುಕೊಂಡು ಬಂದಿರುವಿರಿ? ಎಂದು ಕೇಳಿದಳು.

ಮೀನಾಕ್ಷಿ—ನಿನಗೆ ಇನ್ನು ಯಾರ ಅಂಜಿಕೆಯೂ ಇಲ್ಲ. ಈಗ ನಿರ್ಭಯವಾದ ಸ್ಥಳದಲ್ಲಿ ಇರುತ್ತೀ.

ಕಮಲೆ—ನೀವು ಯಾರು?

ಮೀನಾಕ್ಷಿ—ಯಾವ ಮಹಾಪುರುಷನು ನಿನ್ನನ್ನು ದರವಡೆಖೋರರ ಕೈಯಿಂದ ಉದ್ಧಾರಮಾಡಿದನೋ, ಅವರ ಮನೆಯ ದಾಸಿಯು.

ಕಮಲೆ—ನಿಮ್ಮ ಧನಿಯ ಹೆಸರೇನು?

ಮೀನಾಕ್ಷಿ—ಅವರ ಹೆಸರು ಗೋವಿಂದರಾವ ದೇಸಾಯಿ; ಅವರು ಬಹಳ ಶ್ರೀಮಂತರು.

ಕಮಲೆ—ಏನು? ಹೊಸರಾಮಪುರದ ಇನಾಮದಾರರಾದ ಗೋವಿಂದರಾಯರೇನು?

ಮೀನಾಕ್ಷಿ—ಹೌದು ಅವರೇ ಕಳ್ಳರಕೈಯಿಂದ ನಿನ್ನನ್ನು ಬಿಡಿಸಿಕೊಂಡು ಬಂದರು.

ಕಮಲೆ—ನಿಜವಾಗಿಯೂ ನಾನು ಕಳ್ಳರ ಕೈಗೆ ಸಿಕ್ಕಿದ್ದೆನೇ?

ಮೀನಾಕ್ಷಿ—ಹೌದು. ಅವರೇನೋ ದರೋಡೆಖೋರರಂತೆ ಎಲ್ಲಿಂದ ಬಂದು ನಿನ್ನನ್ನು ಅಪಹರಿಸಿಕೊಂಡು ಬಂದಿದ್ದರೋ ಯಾರಿಗೆ ಗೊತ್ತು? ನಮ್ಮ ಧನಿಯು ರಾತ್ರಿಹೊತ್ತಿನಲ್ಲಿ ಅವಸರದ ಕೆಲಸದ ಸಲುವಾಗಿ ಇಲ್ಲಿಗೆ ಹೊರಟಿದ್ದರು. ದಾರಿಯಲ್ಲಿ ಕಳ್ಳರು ಒಂದು ಗಿಡದ ಬುಡದಲ್ಲಿ ನಿನ್ನ ಕೈಕಾಲು ಕಟ್ಟಿ ಕುಳ್ಳಿರಿಸಿಕೊಂಡು ಕುಳಿತಿದ್ದು, ನಮ್ಮ ಧನಿಯರ ಕುದುರೆಯ ಸುಳಿವು ಕಂಡು ಓಡಿಹೋಗಲಿಕ್ಕೆ ಹವಸಿದರಂತೆ. ಆಗ ಅವರಿಗೆ ಸಂಶಯ ಬಂದು ಬಂದೂಕ ಹಾರಿಸಲು, ಕೆಲವರು

ಅಂಜಿ ಓಡಿ ಹೋದರು. ಇಬ್ಬರು ಮಾತ್ರ ಹೋಗಲಿಲ್ಲ. ಕಡೆಗೆ ದೇಸಾಯಿಯುರು ಅವರನ್ನು ತಮ್ಮ ಸಾಮರ್ಥ್ಯದಿಂದ ನೆಲಕ್ಕೆ ಕೆಡವಿ ಅವರ ಕೈಯಿಂದ ನಿನ್ನನ್ನು ಬಿಡಿಸಿಕೊಂಡು ಇಲ್ಲಿಗೆ ಕರೆದುಕೊಂಡು ಬಂದರು.

ಮೀನಾಕ್ಷಿಯ ಮಾತುಗಳು ನಿಜವೆಂದು ನಂಬಿ ಕಮಲೆಯು—ದೇವರು ನಿಮ್ಮ ದೇಸಾಯರಿಗೆ ಕಲ್ಯಾಣ ಮಾಡಲಿ! ನನಗೆ ಇದಾವದೂ ಲಕ್ಷದಲ್ಲಿಯೇ ಇಲ್ಲ.

ಮೀನಾಕ್ಷಿ—ನಿನಗೆ ಹೇಗೆ ಗೊತ್ತಿರಬೇಕು? ನಿನ್ನ ಮೈಮೇಲೆ ಎಚ್ಚರವೇ ಇದ್ದಿಲ್ಲ. ರಾತ್ರಿ ಎಷ್ಟು ಜನ ಡಾಕ್ಟರರು ಬಂದರು? ಎಷ್ಟು ಉಪಚಾರ ಮಾಡಿದರು; ಅದೆಲ್ಲ ನಿನಗೆ ಗೊತ್ತೇ ಇಲ್ಲ.

ಮೀನಾಕ್ಷಿಯ ಮಾತುಗಳು ನಿಜವೆಂದು ನಂಬಿ ಕಮಲೆಯು ತಾಯಿಯ ಮರಣದಿಂದ ಹಳ್ಳಕ್ಕೆ ಹೋದವರೆಗಿನ ಎಲ್ಲ ಸಂಗತಿಗಳನ್ನೂ ಅವಳಿಗೆ ಹೇಳಿದಳು.

ಮೀನಾಕ್ಷಿ—ನಾನು ಅನೇಕ ಜನರ ಮನೆಯಲ್ಲ ಚಾಕರಿ ಮಾಡಿರುವೆನು. ಇಂಥ ಉದಾರ ಹೃದಯದ ಯಜಮಾನನು ಸಿಕ್ಕಿದ್ದಿಲ್ಲ. ದೇಸಾಯಿಯರು ಬಹಳ ದೊಡ್ಡ ಮನಸ್ಸಿನವರು. ಇರಲಿ. ನಿನ್ನ ಸಲುವಾಗಿ ಹಾಲು ಕಳಿಸಿರುವರು ನೀನು ಸ್ವಲ್ಪ ಹಾಲು ಕುಡಿ. ಅಂದರೆ ಮನಸ್ಸಿಗೆ ಸ್ವಲ್ಪ ಆರಾಮವಾಗುವದು. ಪಾಪ! ಕಂದವ್ವನ ಮೋರೆ ಎಷ್ಟು ಬಾಡಿ ಹೋಗಿದೆ?

ಕಮಲೆ—ಅವ್ವಾ, ನನಗೆ ಈಗ ಅಶೌಚವಿರುವದು. ಸ್ನಾನ ಮಾಡದೆ ಬಾಯಿಯಲ್ಲಿ ಏನೂ ಹಾಕುವದಿಲ್ಲ.

ಮೀನಾಕ್ಷಿ—ಹೌದು, ನೀನು ಅನ್ನುವದು ನಿಜವು; ಆದರೆ ನೀನು ಸ್ನಾನ ಮಾಡಲಿಕ್ಕೆ ವೈದ್ಯರು ನಿಷೇಧಿಸಿರುವರೋ ಹೇಗೆ ಎಂಬದನ್ನು ಕೇಳಿಕೊಂಡು ಬರುವೆನು, ಎಂದು ಹೊರಟಳು.

ಈ ಕೋಣೆಗೆ ಹೊಂದಿರುವ ಮತ್ತೊಂದು ಕೋಣೆಯಲ್ಲಿ ಗೋವಿಂದರಾಯನು ಕುಳಿತು ಮೀನಾಕ್ಷಿ ಮತ್ತು ಕಮಲೆಯರ ಎಲ್ಲ ಮಾತುಗಳನ್ನು ಕೇಳಿದ್ದನು; ಮತ್ತು ಮೀನಾಕ್ಷಿಯ ಜಾಣತನದ ಬಗ್ಗೆ ಮನಸ್ಸಿನಲ್ಲಿ ಅವಳನ್ನು ಬಹಳವಾಗಿ ಹೊಗಳಿದನು.

ಮೀನಾಕ್ಷಿಯು ಹೊರಟು ಹೋದಕೂಡಲೆ ಕಮಲೆಯು ಒಬ್ಬಳೇ ಕೂಡಲಾರದೆ ಕೋಣೆಯ ಹೊರಗೆ ಬಂದಳು. ಹತ್ತರದಲ್ಲಿಯ ಕೋಣೆಯಲ್ಲಿ ಯಾರೋ ಗುಣುಗುಣು ಮಾತಾಡುವಂತೆ ಕೇಳಿಸಿತು. ಏನು ಮಾತಾಡುವದೋ ಕೇಳಬೇಕೆಂದು ಬಾಗಿಲ ಹತ್ತರ ಬಂದು ನಿಂತಳು.

ಕೋಣೆಯ ಬಾಗಿಲು ಮುಂದೆ ಮಾಡಿದ್ದು, ಬಾಗಿಲದ ಒಂದು ಪಡಕಿಗೆ ಒಂದು ಗೋಲಾಕಾರದ ಛಿದ್ರವಿತ್ತು. ಅದರಿಂದ ಒಳಗಿನ ಜನರು ಸ್ಪಷ್ಟವಾಗಿ ಕಾಣಿಸುತ್ತಿದ್ದರು. ತನ್ನ ಹತ್ತರ ಬಂದ ದಾಸಿಯೂ ಅಲ್ಲಿ ಕುಳಿತಿದ್ದಳು. ಒಬ್ಬ ಮನುಷ್ಯನು ಮೆಲ್ಲಗೆ ನಗುತ್ತಿದ್ದನು. ಆಗ ಅವಳು ತನ್ನನ್ನು ಉದ್ಧಾರ ಮಾಡಿದ ಮಹಾತ್ಮನೂ ಅವನ ದಾಸಿಯೂ ಇವರೇ ಎಂದು ನಿರ್ಧರಿಸಿಕೊಂಡಳು.

ಗೋವಿಂದರಾಯನು ಮೀನಾಕ್ಷಿಯ ಬೆನ್ನು ಚಪ್ಪರಿಸಿ—'ನಾನು ಬಾಗಿಲದಲ್ಲಿ ನಿಂತು ನಿಮ್ಮ ಎಲ್ಲ ಮಾತುಗಳನ್ನು ಕೇಳಿರುವೆನು. ಮೀನಾಕ್ಷೀ ನೀನು ಬಹಳ ಚತುರಳು' ಎಂದನು.

ಮೀನಾಕ್ಷಿ—ಅದು ನಿಮ್ಮ ಅನುಗ್ರಹವಲ್ಲವೇ? ನಾನು ಅನೇಕ ಸುಂದರ ಹೆಂಗಸರನ್ನು ನೋಡಿರುವೆನು; ಆದರೆ ಅವರಲ್ಲಿ ಒಬ್ಬರೂ ಇಷ್ಟು ಸುಂದರಿಯರಿದ್ದಿಲ್ಲ. ನಿಮ್ಮ ಕಣ್ಣುಗಳು ಯೋಗ್ಯವನ್ನುವನ್ನೇ ಹುಡುಕಿವೆ. ಅದ್ದರಿಂದಲೇ "ದೊಡ್ಡವರ ನಜರು" ಅನ್ನುವರು.

ಮೀನಾಕ್ಷಿಯ ಮಾತುಗಳಿಂದ ಗೋವಿಂದರಾಯನು--ಮತ್ತೇನುವಿಶೇಷ? ಎಂದು ಕೇಳಿದನು.

ಮೀನಾಕ್ಷಿ—ಅವಳು ಸ್ನಾನ ಮಾಡದೆ ಹಾಲು ಸಹ ತೆಗೆದುಕೊಳ್ಳುವದಿಲ್ಲೆಂದು ಅನ್ನುವಳು.

ಗೋವಿಂದ—ಸ್ನಾನ ಮಾಡುತ್ತಿದ್ದರೆ ಮಾಡಲಿ, ಅದಕ್ಕೇನೂ ಅಡ್ಡಿಯಿಲ್ಲ; ಸ್ನಾನ ಮಾಡುವದರಿಂದ ನಾವು ವಾಸನೆ ತೋರಿಸಿದ ಔಷಧದ ಶೇಷವು ಕೂಡಾ ಹೋಗುವದು; ಆದರೆ ನೀನು ಅವಳ ಹತ್ತರವೇ ಇರು, ಲಕ್ಷದಲ್ಲಿರಲಿ.

ಮೀನಾಕ್ಷಿಯು ಹೊರಡಲಿಕ್ಕೆ ಸಿದ್ಧಳಾಗಿ ಮೋರೆ ತಿರುಗಿಸಿದಳು. ಕೂಡಲೆ ಗೋವಿಂದರಾಯನು ಅವಳನ್ನು ಒದರಿ—ಇಕೋ, ನಿನ್ನ ಕೆಲಸದ ಬಗ್ಗೆ ಇನಾಮು ಹಿಡಿ. ನನ್ನ ಬಗ್ಗೆ ಅವಳ ಮನ ಒಲಿಸಿದರೆ ಇದಕ್ಕೂ ಹೆಚ್ಚಿನ ಇನಾಮು ಕೊಡುವೆನು.

ಮೀನಾಕ್ಷಿಯು ನಗುತ್ತ ಆ ರೂಪಾಯಿಗಳನ್ನು ಶೆರಗಿನಲ್ಲಿ ಕಟ್ಟಿಕೊಂಡು—ನಿಮ್ಮ ಅನ್ನದಿಂದಲೇ ನಾನು ಉಪಜೀವಿಸುವೆನು. ಅಂದಬಳಿಕ ನಿಮ್ಮ ಕಾರ್ಯ ಮಾಡಿದರೆ ತೀರಿತು. ನನ್ನ ಇನಾಮು ಎಲ್ಲಿ ಹೋಗುವದು? ಸಿಕ್ಕೇ ಸಿಗುವದು.

ಅವರ ಸಂಭಾಷಣ ಕೇಳಿದಕೂಡಲೆ ಮಾತೃವಿಯೋಗದಿಂದ ದುಃಖಿತಳಾದ ಕಮಲೆಯ ಮುಖವು ಪೂರಾ ಬಾಡಿ ಹೋಯಿತು. ಅವಳು ಮನಸ್ಸಿನಲ್ಲಿ—

ದುಃಖಕ್ಕೆ ಸೀಮೆ ಇರುವದು. ಕಷ್ಟಕ್ಕೆ ಮೇರೆ ಇರುವದು; ಆದರೆ ನನ್ನಂಥ ನಿರ್ಭಾಗ್ಯಳಿಗೆ ಅದು ಇರಲಿಕ್ಕಿಲ್ಲವೇನು? ಪ್ರಭೋ ನಾರಾಯಣ, ದೀನದಯಾಳೋ!! ನನ್ನನ್ನು ಈ ಸಂಕಟದಿಂದ ಪಾರುಮಾಡು. ನನ್ನ ಪತಿಯು ನನ್ನನ್ನು ತ್ಯಾಗ ಮಾಡಿದನು. ತಾಯಿ-ತಂದೆಗಳು ಈ ಜಗತ್ತಿನಲ್ಲಿ ನನ್ನೊಬ್ಬಳನ್ನೇ ಬಿಟ್ಟು ಹೊರಟು ಹೋದರು. ಈ ಎಲ್ಲ ದುಃಖವನ್ನು ತಡಕೊಂಡೆನು; ಆದರೆ ದೇವರೇ ಈಗ ಸದ್ಯಕ್ಕೆ ನನ್ನಮುಂದೆ ಬಾಯಿತೆರೆದು ನಿಂತಿರುವ ಈ ಸಂಕಟದೊಳಗಿಂದ ಪಾರಾಗಲಾರೆ. ಹೇಗಾದರೂ ಮಾಡಿ ನನ್ನನ್ನು ಪಾರುಮಾಡು. ನನ್ನ ಪಾತಿವ್ರತ್ಯವನ್ನು ರಕ್ಷಿಸು; ಎಂದು ಪ್ರಾರ್ಥಿಸಿ ಇನ್ನು ಇಲ್ಲೇ ನಿಂತರೆ, ಮೀನಾಕ್ಷಿಯು ಹೊರಗೆ ಬರುವ ಹೊತ್ತಾಗಿದೆ. ಅವಳು ನೋಡುವಳು,ಎಂದು ಭಾವಿಸಿ,ತನ್ನ ಕೋಣೆಯೊಳಗೆ ಹೋಗಿ, ಹಾಸಿಗೆಯ ಮೇಲೆ ಮಲಗಿದಳು.

ಮೀನಾಕ್ಷಿಯು ಕೋಣೆಯೊಳಗೆ ಬಂದು—ತಂಗೀ, ಮತ್ತೆ ಹಾಸಿಗೆಯ ಮೇಲೆ ಹೋಗಿ ಯಾಕೆ ಮಲಗಿದೆ?

ಕಮಲೆ—ನನ್ನ ತಲೆಯು ತಿರುಗಹತ್ತಿದೆ. ಕೂಡುವದು ಆಗಲಿಲ್ಲ, ಕಾರಣ ಮಲಗಿಕೊಂಡೆನು.

ಮೀನಾಕ್ಷಿ—ನಡೆ, ಮೈತೊಳಕೋ; ಸ್ವಲ್ಪ ಹಾಲು ಕುಡಿ. ಅಂದರೆ ಹುಷಾರಿಯಾಗುವದು.

ಕಮಲೆ—ನಿಮ್ಮ ದೇಸಾಯಿಯವರು ಏನು ಮಾಡುವರು?

ಮೀನಾಕ್ಷಿ—ಹೊರಗಿನ ಪಡಸಾಲೆಯಲ್ಲಿ ಕುಳಿತು ತಮ್ಮ ಹೊಲ ಮನೆಯ ಕಾಗದ-ಪತ್ರಗಳನ್ನು ನೋಡುತ್ತಿರುವರು.

ಮೀನಾಕ್ಷಿಯು ರಾಕ್ಷಸಿಯೆಂದು ಕಮಲೆಯು ಮನಸ್ಸಿನಲ್ಲಿ ಗೊತ್ತುಮಾಡಿಕೊಂಡಳು. ತಾನು ಗುಪ್ತವಾಗಿ ಕೇಳಿದ ಎಲ್ಲ ಮಾತುಗಳನ್ನೂ ಅವಳ ಮುಂದೆ ಹೇಳಬೇಕೆಂದು ಮಾಡಿದಳು; ಆದರೆ ಧೈರ್ಯವಾಗಲಿಲ್ಲ. ನಂತರ ಮೀನಾಕ್ಷಿಯನ್ನು ಕುರಿತು—ನಡೆಯಿರಿ, ಸ್ನಾನಕ್ಕೆ ಹೋಗೋಣ.

ಮೀನಾಕ್ಷಿ—ತಲೆಗೆ ಸ್ವಲ್ಪ ಎಣ್ಣೆ ಹಚ್ಚಿಕೊಳ್ಳುವಿಯಾ?

ಕಮಲೆ—ನನಗೆ ಮೈಲಿಗೆ ಅದೆ. ಕಾರಣ ಎಣ್ಣೆ ಹಚ್ಚಿಕೊಳ್ಳುವದಿಲ್ಲ.

ಮೀನಾಕ್ಷಿ—ಹಾಗಾದರೆ ಇನ್ನು ಸ್ವಲ್ಪ ತಡೆ. ನೀರು ಛೆನ್ನಾಗಿ ಕಾಯುವವು.

ಕಮಲೆ—ನಾನು ಬಿಸಿನೀರು ಒಲ್ಲೆ; ಇಳಿಯುವ ಭಾವಿಇದ್ದರೆಹೋಗೋಣ,

ಮೀನಾಕ್ಷಿ—ಹಾಗಾದರೆ ಈ ತೋಟದ ಮಗ್ಗಲಿಗೇ ನದಿಯಿದೆ. ಅಲ್ಲಿಗೆ ಹೋಗೋಣ.

ಕಮಲೆ—ಯಾವ ನದಿಯು?.

ಮೀನಾಕ್ಷಿ—ತುಂಗಭದ್ರಾ ನದಿಯು.

ಆಗ ಇಬ್ಬರೂ ಕೂಡಿ ನದಿಯ ದಂಡೆಗೆ ಬಂದರು. ಕಮಲೆಯು ಮನಸ್ಸಿನಲ್ಲಿ—ನಾನು ಇನ್ನು ತಿರುಗಿ ತೋಟಕ್ಕೆ ಹೋಗದೆ ನನ್ನ ಜ್ವಾಲಾಮಯ ದೇಹವನ್ನು ಈ ತುಂಗಭದ್ರಾ ನದಿಯ ಗರ್ಭದಲ್ಲಿ ಅಡಗಿಸುವೆನು. ಈ ರೂಪವೂ ಯೌವನವೂ ನನಗೆ ಶತ್ರುಗಳು. ನಾನು ಈ ಎರಡೂ ಶತ್ರುಗಳ ನಾಶವನ್ನು ಇಂದು ಮಾಡುವೆನು, ಎಂದು ಸಂಕಲ್ಪ ಮಾಡಿಕೊಂಡಳು.

ಕಮಲೆಯು ನದಿಯೊಳಗೆ ಇಳಿಯ ಹತ್ತಿದಳು. ಮೀನಾಕ್ಷಿಯು ದಂಡೆಯ ಮೇಲೆ ಕುಳಿತು ಅವಳ ಕಡೆಗೆ ನೋಡುತ್ತಿದ್ದಳು. ಅವಳ ಮನಸ್ಸಿನಲ್ಲಿ—ಕಮಲೆಯು ನದಿಯಲ್ಲಿ ಮುಳುಗಿ ಸತ್ತರೆ ಹೇಗೆ? ಎಂಬ ದುಷ್ಟ ಕಲ್ಪನೆಯು ಬಂತು.

ಇದೇ ವೇಳೆಯಲ್ಲಿ ಕಮಲೆಯ ಮನಸ್ಸು—ಕಮಲೆ, ನಿನ್ನಂಥ ನಿರ್ಭಾಗ್ಯಳು ಯಾರೂ ಇಲ್ಲ. ನಿನಗೆ ಯಾರೂ ಗತಿಯಿಲ್ಲ. ಗಂಡನು ಬಿಟ್ಟಿರುವನು. ರೂಪವೆಂಬುವ ವೈರಿಯು ಬಾಯಿತೆರೆದುಕೊಂಡೇ ಕುಳಿತಿರುವದು. ಕಾಮಾಂಧನಾದ ಒಬ್ಬ ನರಪಿಶಾಚಿಯು ನಿನ್ನ ಸತೀತ್ವವನ್ನು ನಾಶಮಾಡಲಿಕ್ಕೆ ಸಿದ್ಧನಾಗಿರುವನು. ತಾಯಿಯು ನಿನ್ನ ಸಲುವಾಗಿ ಅಂತರಿಕ್ಷದಲ್ಲಿ ಮಾರ್ಗನಿರೀಕ್ಷಣೆ ಮಾಡುತ್ತಿರುವಳು. ಕಾರಣ ನೀನು ತಾಯಿಯ ಹತ್ತರ ಹೊರಟುಹೋಗು. ಸ್ವರ್ಗದಲ್ಲಿ ನಿನಗೆ ಶಾಂತಿ ದೊರೆಯುವದು. ಅಲ್ಲಿ ಮನುಷ್ಯರ ಅತ್ಯಾಚಾರವಿಲ್ಲ. ಪೀಡೆ ಇಲ್ಲ. ಈ ಪ್ರಕಾರ ವಿಚಾರಮಾಡುತ್ತ ಮಾಡುತ್ತ ಅವಳು ನೀರೊಳಗೆ ಇಳಿಯಹತ್ತಿದಳು. ನದಿಯ ನೀರು ಕ್ರಮವಾಗಿ ಅವಳ ಎದೆಗೆ ಬಂತು. ತರಂಗಗಳು ಅವಳನ್ನು ನುಂಗಲಿಕ್ಕೆ ಹಾತೊರೆಯುತ್ತಿದ್ದವು; ಆದರೂ ಅವಳು ಭಯಪಡಲಿಲ್ಲ. ಕಡೆಗೆ ಅವಳು ಕುತ್ತಿಗೆಮಟ ನೀರೊಳಗೆ ಹೋಗಿ ಬಿಟ್ಟಳು.

ಮೀನಾಕ್ಷಿಯು ದಂಡೆಯ ಮೇಲೆ ನಿಂತು ಗಟ್ಟಿಯಾಗಿ—ತಂಗೀ, ಇನ್ನು ದೂರ ಹೋಗಬೇಡ, ಅಲ್ಲಿ ಮಡವು ಅದೆ. ಅಲ್ಲೇ ಕುಳಿತು ಒಮ್ಮೆ ಮುಳುಗಿ, ಬೇಗ ಬಾ.

ಮೀನಾಕ್ಷಿಯು ಒದರಿದ್ದು ಕಮಲೆಗೆ ಕೇಳಿಸಿತು. ಆದರೂ ಅವಳು ಆ ಕಡೆಗೆ ಲಕ್ಷ್ಯಗೊಡಲಿಲ್ಲ. ಅವಳು ಅಲ್ಲಿಂದ ಒಂದು ಹೆಜ್ಜೆ ಮುಂದೆ ಇಟ್ಟಳು. ಕೂಡಲೆ ಪ್ರವಾಹದ ಸೆಳವಿಗೆ ಬಿದ್ದುಬಿಟ್ಟಳು!

ಮೀನಾಕ್ಷಿಯು ಗಾಬರಿಯಾದಳು. ಅವಳಿಗೆ ಈಸಲಿಕ್ಕೆ ಬರುತ್ತಿದ್ದರೆ ತಟ್ಟನೆ ಹಾರಿಕೊಂಡು ಅವಳನ್ನು ಒದುಕಿಸುವ ಪ್ರಯತ್ನ ಮಾಡುತ್ತಿದ್ದಳು. ಮಾಡುವ ದೇನು? ಮೋರೆಸಪ್ಪಗೆ ಮಾಡಿಕೊಂಡು ಓಡುತ್ತ ಗೋವಿಂದರಾಯನ ಕೋಣೆಗೆ ಬಂದಳು.

ಗೋವಿಂದರಾಯನು ಒಂದು ಖುರ್ಚಿಯ ಮೇಲೆ ಬಿದ್ದುಕೊಂಡು ಕಣ್ಣು ಮುಚ್ಚಿ ಸುಖಸ್ವಪ್ನದಲ್ಲಿ ಮಗ್ನನಾಗಿದ್ದನು. ಈ ವೇಳೆಯಲ್ಲಿ ಮೀನಾಕ್ಷಿಯು ಬಂದು—ಹುಜೂರ, ಹುಜೂರ, ಘಾತವಾಯಿತು!! ಎಂದಳು.

ಗೋವಿಂದರಾಯನು ಒಮ್ಮಿಂದೊಮ್ಮೆ ಎಚ್ಚತ್ತು ಎದ್ದು ನಿಂತು—ಮೀನಾಕ್ಷೀ ಏನಾಯಿತು? ಇಷ್ಟೇಕೆ ಗಾಬರಿಯಾಗಿರುವಿ?

ಮೀನಾಕ್ಷಿ—ಹುಜೂರ, ಕಮಲೆಯು ಸ್ನಾನ ಮಾಡಮಾಡುತ್ತ ನದಿಯಲ್ಲಿ ಮುಳುಗಿ ಬಿಟ್ಟಳು.

ಗೋವಿಂದರಾಯನು ಮೋರೆ ಸೊಟ್ಟ ಮಾಡಿ ದವಡೆಯನ್ನು ಕಚ್ಚಿ—"ಹಾಗಾದರೆ ನೀನು ಅವಳ ಸಂಗಡ ಯಾಕೆ ಕತ್ತೀ ಕಾಯಲಿಕ್ಕೆ ಹೋಗಿದ್ದೆ? ನಿನಗೇನು ಧಾಡಿಯಾಗಿತ್ತು?'' ಎಂದನು.

ಮೀನಾಕ್ಷಿಯು ದೀನಸ್ವರದಿಂದ ಮೋರೆ ಸಪ್ಪಗೆ ಮಾಡಿಕೊಂಡು ಕಣ್ಣೀರು ಸುರಿಸುತ್ತ—ಹುಜೂರ, ನಾನೇನು ಮಾಡಲಿ? ನಾನು ಮುಂದೆ ಹೋಗಬೇಡ, ಅಲ್ಲಿ ಮಡವು ಅದೆ, ಎಂದು ಹೇಳಿದೆನು. ಅವಳು ನನ್ನ ಮಾತಿನ ಕಡೆಗೆ ಲಕ್ಷ ಕೊಡಲಿಲ್ಲ.

ಕೈಗೆ ಬಂದ ತುತ್ತು ಬಾಯಿಗೆ ಬಾರದ್ದನ್ನು ನೋಡಿ ಗೋವಿಂದರಾಯನಿಗೆ ಬಹಳ ಸಿಟ್ಟು ಬಂತು; ಅವನು ಮೀನಾಕ್ಷಿಯನ್ನು ಬಾಯಿಗೆ ಬಂದಂತೆ ಬಯ್ಯುತ್ತ ಹೊರಗೆ ಬಂದನು. ತೋಟದಲ್ಲಿ ಕೆಲಸ ಮಾಡುತ್ತಿದ್ದ ೫-೬ ಜನರನ್ನು ಕರಕೊಂಡು ನದೀ ದಂಡೆಗೆ ಬಂದನು. ಆ ಮೇಲೆ ಅವರನ್ನು ಕುರಿತು—ಈ ಮಡುವಿನಲ್ಲಿ ಒಬ್ಬ ಹೆಂಗಸು ಈಗ ಮುಳುಗಿರುವಳು. ಅವಳನ್ನು ತಂದು ಕೊಟ್ಟವರಿಗೆ ಹತ್ತು ರೂಪಾಯಿ ಇನಾಮು ಕೊಡುವೆನು.

ಯಾರಿಗೆ ಈಸಲಿಕ್ಕೆ ಬರುತ್ತಿತ್ತೋ ಅವರು ನದಿಯಲ್ಲಿ ಹಾರಿಕೊಂಡು ಮುಳುಗಿ ಎಲ್ಲ ಕಡೆಗೂ ಶೋಧ ಮಾಡಿದರು. ಯಾರಿಗೂ ಶೋಧವಾಗಲಿಲ್ಲ.

ಮೀನಾಕ್ಷಿ—ಅವಳು ಮುಳುಗಿದ ಕೂಡಲೆ ಜನರು ಇದ್ದರೆ ಕಡೆಗೆ ತೆಗೆಯಬಹುದಾಗಿತ್ತು. ಪ್ರವಾಹದ ಕೂಡ ಎತ್ತ ಹರಿದು ಹೋದಳೋ ಯಾರಿಗೆ ಗೊತ್ತು? ಇನ್ನು ಮುಂದೆ ಹೇಗೆ ಮಾಡಬೇಕು?

ಗೋವಿಂದರಾಯನ ಸಿಟ್ಟು ಹೆಚ್ಚಾಯಿತು. ಅವನು ಮೀನಾಕ್ಷಿಯನ್ನು ಗುದ್ದಬೇಕೆಂದು ಮಾಡಿದ್ದನು. ಮತ್ತೆ ಏನೋ ವಿಚಾರ ಮಾಡಿ ಸಿಟ್ಟನ್ನು ತಡೆದು ಕೊಂಡು ಉದಾಸೀನ ದೃಷ್ಟಿಯಿಂದ ಆ ಮಡುವಿನ ಕಡೆಗೆ ನೋಡಹತ್ತಿದನು.

ಗೋವಿಂದರಾಯನ ಉಗ್ರಮುಖವನ್ನು ನೋಡಿ ಮೀನಾಕ್ಷಿಯು ಗಾಬರಿಯಾಗಿ—ಹುಜೂರ, ಮುಂದೆ ಏನು ಮಾಡಬೇಕು? ಎಂದಳು.

ಗೋವಿಂದ—ಮಾಡುವದೇನು, ನಿನ್ನ ಹಜಾಮತಿ? ಇದು ಪೋಲೀಸ ಕೇಸು ಆಗಿರುವದು; ಠಾಣೇಕ್ಕೆ ವರ್ದಿ ಕಳಿಸಬೇಕು.

ಪೋಲೀಸರ ಹೆಸರು ಕೇಳಿದ ಕೂಡಲೆ ಮೀನಾಕ್ಷಿಯ ಎದೆಯು ಹಾರ ಹತ್ತಿತು; ಅವಳು—ಹುಜೂರ, ಬೇಡಿರಿ ಹಾಗೆ ಮಾಡಬೇಡಿರಿ. ನಾನು ಹಿಂದ ಕ್ಕೊಮ್ಮೆ ಪೋಲೀಸರ ಕೈಗೆ ಸಿಕ್ಕು ಬಹಳ ಪೇಚಾಡಿರುವೆನು. ಹಾಗೆ ಮಾಡಿ ದರೆ ನಿಮ್ಮ ಮರ್ಯಾದೆಗೂ ಕುಂದು ಬರುವದು.

ಮೀನಾಕ್ಷಿಯ ಮಾತು ಕೇಳಿ ಗೋವಿಂದರಾಯನು—ಹೌದು. ನೀನು ಹೇಳಿದ್ದು ನಿಜವು, ಎಂದು ಮನೆಗೆ ಹೋಗಿ ಪೆಟ್ಟಿಗೆಯಲ್ಲಿಯ ರೂಪಾಯಿಗಳನ್ನು ತೆಗೆದು ಅಲ್ಲಿಗೆ ಬಂದ ಎಲ್ಲ ಜನರಗೂ ನಾಲ್ಕು ನಾಲ್ಕು ರೂಪಾಯಿಗಳನ್ನು ಕೊಟ್ಟು, ಅವರ ಬಾಯಿ ಬಂದು ಮಾಡಿದನು.

## [ ೧೮ ]

...

ಪಾತಿವ್ರತ್ಯವನ್ನು ಕಾಯ್ದುಕೊಳ್ಳುವದರ ಸಲುವಾಗಿ ಕಮಲೆಯು ನದಿಯಲ್ಲಿ ಹಾರಿಕೊಂಡಳು; ಆದರೆ ಅದರಿಂದ ಅವಳು ಸಾಯಲಿಲ್ಲ. ದೇವರು ಮತ್ತೆ ಅವಳನ್ನು ಪುನಃ ಬದುಕಿಸಿದನು.

ಕಮಲೆಯು ನದಿಯಲ್ಲಿ ತೇಲುತ್ತ ಸುಮಾರು ಒಂದು-ಒಂದೂವರೆ ಮೈಲು ಹೋಗಿದ್ದಳು; ಆದರೆ ಭಗವಂತನ ಲೀಲೆಯಿಂದ ಅದೇ ಹೊತ್ತಿಗೆ ಒಂದು ಡೋಣಿಯು ಬಂತು. ಅಂಬಿಗರು ತೇಲಿಬರುವ ಈ ಹೆಂಗಸನ್ನು ನೋಡಿ ಚಿಟ್ಟನೆ ಚೀರಿದರು. ಆ ಡೋಣಿಯೊಳಗೆ ಒಬ್ಬ ದೊಡ್ಡ ಮನುಷ್ಯನು ಕುಳಿತಿದ್ದನು. ಅವನು ಅಂಬಿಗರನ್ನು ಕುರಿತು ಹೀಗೇಕೆ ಮಾಡಿದಿರಿ? ಎಂದು ಕೇಳಲು, ಅವರು ತೇಲಿಬರುವ ಆ ಹೆಣದ ಕಡೆಗೆ ಕೈಮಾಡಿ ತೋರಿಸಿದರು. ಕೂಡಲೆ ಅವನು

ಅಂಬಿಗರನ್ನು ಕುರಿತು—ಆ ಶರೀರವನ್ನು ಯಾರು ತೆಗೆದುಕೊಂಡು ದಂಡೆಗೆ ಬರುವಿರೋ ಅವರಿಗೆ ಇನಾಮು ಕೊಡುವೆನು, ಎಂದನು.

ಕೂಡಲೆ ಇಬ್ಬರು ಅಂಬಿಗರು ನದಿಯಲ್ಲಿ ಹಾರಿಕೊಂಡು ಪ್ರವಾಹದ ಸಂಗಡ ಹೋರಾಡಿ ಆ ದೇಹವನ್ನು ದಂಡೆಗೆ ತೆಗೆದುಕೊಂಡು ಬಂದರು. ಆ ದೇಹವು ಪರಮ ಸುಂದರಿಯಾದ ಒಬ್ಬ ಸ್ತ್ರೀಯಳದು. ಅದನ್ನು ನೋಡಿ ಆ ಗೃಹಸ್ಥನು ಮನಸ್ಸಿನಲ್ಲಿ—ಇವಳು ಅಕಸ್ಮಾತ್ತಾಗಿ ಬಿದ್ದಿರಬಹುದೇನು? ಇಲ್ಲವೆ ಆತ್ಮಹತ್ಯೆ ಮಾಡಿಕೊಂಡಿರಬಹುದೋ? ಏನೇ ಆಗಲಿ; ಬದುಕುವ ಲಕ್ಷಣವು ಕಾಣುತ್ತದೆ; ಯತ್ನಮಾಡಿ ನೋಡೋಣ. ಮೋರೆ ನೋಡಿದರೆ ದೊಡ್ಡ ಮನೆ ತನಸ್ಥಳೆಂದು ತೋರುತ್ತದೆ. ಇಷ್ಟರಲ್ಲಿ ಆ ಗೃಹಸ್ಥನ ಹೆಂಡತಿಯು ಬಂದುನೋಡಿ "ಅವ್ವಯ್ಯ! ಇದೇನು? ಇವಳು ಯಾರು? ಪಾಪ! ವ್ಯರ್ಥವಾಗಿ ಸತ್ತಿರುವಳಲ್ಲ!"

ಅಂಬಿಗರು ತಮ್ಮ ಅನುಭವದಪ್ರಕಾರ ಉಪಚಾರಮಾಡಿ, ತಮಗೆ ಸಾಧ್ಯವಾದಷ್ಟು ನೀರನ್ನು ಹೊಟ್ಟೆಯೊಳಗಿಂದ ಕಡೆಗೆ ತೆಗೆದರು; ಮತ್ತು ಕೃತ್ರಿಮ ಉಪಾಯಗಳಿಂದ ಶ್ವಾಸೋಚ್ಛ್ವಾಸವುಂಟಾಗುವಂತೆ ಮಾಡಿದರು.

ಅವರ ದಮಣಿಯು ಗಾಡಿಯು ಸಿದ್ಧವಾಗಿತ್ತು. ಆ ಗೃಹಸ್ಥನು ಗಾಡಿಯಲ್ಲಿ ಗಾದಿಯನ್ನು ಹಾಸಿ, ಅದರ ಮೇಲೆ ಕಮಲೆಯನ್ನು ಮಲಗಿಸಿ, ತಲೆಗಿಂಬಿಗೆ ತಾನೂ, ಕಾಲ ಹತ್ತರ ಹೆಂಡತಿಯೂ ಕೂತುಕೊಂಡು ಊರಹಾದೀ ಹಿಡಿದರು.

ಆ ಗೃಹಸ್ಥನ ಹೆಸರು ಅಣ್ಣಾರಾವ ಪೋತದಾರ. ಅವನು ಹೊಸಪೇಟೆಯ ಮಾಮಲೇದಾರನು. ಅವನು ಅಂದಿನ ದಿವಸ ಪ್ರಯತ್ನಪಟ್ಟು ಹೊಸಪೇಟೆಗೆ ಬಂದು ಮುಟ್ಟಿದನು. ಮನೆಯಲ್ಲಿ ಚನ್ನಾಗಿ ಹವೆಯಾಡುವ ಒಂದು ಕೋಣೆಯಲ್ಲಿ ಅವಳನ್ನು ಮಲಗಿಸಿ, ತನ್ನ ಸ್ನೇಹಿತನಾದ ಡಾಕ್ಟರನನ್ನು ಕರೆಕಳುಹಿದನು.

ಕೂಡಲೆ ಅವನ ಮಿತ್ರನಾದ ಜಾಹಗೀರದಾರ ಡಾಕ್ಟರನು ಆಮಂತ್ರಣದ ಮೇರೆಗೆ ಅಣ್ಣಾರಾಯನ ಮನೆಗೆ ಬಂದನು; ಮತ್ತು ಅಣ್ಣಾರಾಯನನ್ನು ನೋಡಿ "ನೀವು ಯಾವಾಗ ಬಂದಿರಿ? ವಿಶೇಷವೇನು?"

ಅಣ್ಣಾರಾವ—ನಾವು ಇದೇ ಈಗ ಬಂದೆವು. ನಡೆಯಿರಿ, ಕೋಣೆಯೊಳಗೆ ಹೋಗೋಣ. ಆಮೇಲೆ ಎಲ್ಲವನ್ನೂ ಹೇಳುವೆನು.

ಡಾಕ್ಟರನು ಕೋಣೆಯಲ್ಲಿಬಂದು ಮೈಮೇಲೆ ಎಚ್ಚರವಿಲ್ಲದೆ ಬಿದ್ದ ಕಮಲೆಯನ್ನು ಪರೀಕ್ಷಿಸಿ—ಈಗ ಸದ್ಯಕ್ಕೆ ಬರೇ ಚಿಕಿತ್ಸೆಯನ್ನು ಮಾಡುವದು ಅವಶ್ಯವು. ನೀವು ಅಂಜುವ ಕಾರಣವಿಲ್ಲ.

ಅಣ್ಣಾರಾಯನ ಹೆಂಡತಿಯಾದ ಇಂದಿರಾಬಾಯಿಯು ಒಳಗೆ ಬಂದು—ಅಹಾ! ಇವಳು ಎಷ್ಟು ಸುಂದರಳಿರುವಳು? ಡಾಕ್ಟರರೇ, ಇವಳು ಬದುಕಬಹುದೇನು?

ಡಾಕ್ಟರ:—ನೀವು ಕಾಳಜಿ ಮಾಡಬೇಡಿರಿ. ಇವಳಿಗೆ ಗುಣವಾಗುವದು. ಇಂದು ರಾತ್ರಿ ಇವಳಿಗೆ ಮೈಮೇಲೆ ಎಚ್ಚರ ಹುಟ್ಟುವದು.

ಆ ಉದಾರ ಮನಸ್ಸಿನ ದಂಪತಿಗಳು ಹಗಲೂ-ರಾತ್ರಿ ಒಂದೇಸವನೆ ರೋಗಿಯ ಶುಶ್ರೂಷಣೆಮಾಡಿದರು. ಡಾಕ್ಟರರ ಹೇಳಿಕೆಯಂತೆ ರಾತ್ರಿ ರೋಗಿಗೆ ಚೇತನವು ಬಂದಿತು. ಕಮಲೆಯು ಕಣ್ಣುತೆರೆದು ನಾಲ್ಕೂ ಕಡೆಗೆ ದಿಟ್ಟಿಸಿ ನೋಡಿದಳು. ಅವಳಿಗೆ ಹಿಂದಿನ ಎಲ್ಲ ಸಂಗತಿಗಳೂ ನೆನಪಿಗೆ ಒಂದವು. ಆಗ ಅವಳು ಗಟ್ಟಿಯಾಗಿ—"ನಾನು ಎಲ್ಲಿರುವೆನು?" ಎಂದಳು.

ಅವಳ ತಲೆಗಿಂಬಿನ ಹತ್ತರ ಕುಳಿತ ಇಂದಿರೆಯು ಸ್ನೇಹಪೂರ್ಣ ಸ್ವರದಿಂದ "ಮಗಳೇ ಅಂಜಬೇಡ. ನೀನು ಸುರಕ್ಷಿತವಾದ ಸ್ಥಳದಲ್ಲಿ ಇರುತ್ತೀ."

ಕಮಲೆಯು ದಿಟ್ಟಿಸಿ ನೋಡಿ—ವಿಶ್ವಮೋಹಿನಿಯಾದ ಜಗಜ್ಜನನಿಯಂತೆ ನನ್ನ ಹತ್ತರ ಕುಳಿತ ನೀವು ಯಾರು?

ಇಂದಿರೆಯು ಪ್ರೇಮದಿಂದ—ಸದ್ಯಕ್ಕೆ ನಾನು ನಿನ್ನ ತಾಯಿಯು.

ಕೂಡಲೆ ಅವಳಿಗೆ ಮರಣಹೊಂದಿದ ತಾಯಿಯ ನೆನಪಾಯಿತು. ಸ್ಮಶಾನದಲ್ಲಿಯ ಭಯಂಕರವಾದ ವ್ಯಾಪಾರದನಂತರ ಗೋವಿಂದರಾಯನ ಕೈಯಲ್ಲಿ ಸಿಕ್ಕದ್ದೂ, ಕೊನೆಗೆ ನದಿಯಲ್ಲಿ ಹಾರಿಕೊಂಡದ್ದೂ ನೆನಪಾಗಿ ಅವಳು ಅಂಜಿಕೆಯಿಂದ ಕಣ್ಣುಮುಚ್ಚಿದಳು.

ಡಾಕ್ಟರನು ಹಾಲಿನಲ್ಲಿ ಕೂಡಿಸಿ ಕೊಡಲಿಕ್ಕೆ ಒಂದು ಔಷಧ ಕೊಟ್ಟಿದ್ದನು. ಅದನ್ನು ತೆಗೆದುಕೊಂಡರೆ ನಿದ್ದೆ ಬರುತ್ತಿತ್ತು. ಇಂದಿರೆಯು ಆ ಔಷಧವನ್ನು ತಯಾರಮಾಡಿ—ಮಗೂ, ಈ ಹಾಲು ಕುಡಿ; ಅಂದರೆ ನಿನಗೆ ನಿದ್ದೆಯು ಹತ್ತುವದು.

ಕಮಲೆ—ಅವ್ವಾ, ಇಂದು ನಾನು ಹಾಲು ಕುಡಿಯುವದಿಲ್ಲ.

ಇಂದಿರೆಯು ಸ್ನೇಹಪೂರ್ಣ ತಿರಸ್ಕಾರದಿಂದ—ಇದು ಔಷಧವು. ತೆಗೆದುಕೊಳ್ಳಲಿಕ್ಕೇಬೇಕು. ನಾನು ನಿನಗೆ ಅವ್ವನು. ಅವ್ವನ ಮಾತು ಮಗಳು ಕೇಳಲಿಕ್ಕೇ ಬೇಕು.

ಅಹಾ! ತಿರಸ್ಕಾರದಲ್ಲಿ ಕೂಡ ಎಷ್ಟು ಸ್ನೇಹ? ಎಷ್ಟು ಮಮತೆ? ಎಷ್ಟು

ಅಂತಃಕರಣವು! ಎಷ್ಟು ಆಗ್ರಹವು? ಕಮಲೆಗೆ ಅವಳ ಮಾತು ಮೀರುವದಾಗ ಲಿಲ್ಲ. ಅವಳು ಹಾಲು ಮಿಶ್ರಿತ ಔಷಧವನ್ನು ಕುಡಿದಳು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಗಾಢವಾದ ನಿದ್ರೆಯು ಹತ್ತಿತು.

ಮರುದಿವಸ ಕಮಲೆಗೆ ಸ್ವಲ್ಪ ಗುಣವಾಯಿತು. ಅವಳು ಎದ್ದು ಕೋಣೆಯಲ್ಲಿಯೇ ಅಡ್ಡಾಡಹತ್ತಿದಳು. ಇಂದಿರೆಯು ಯುಕ್ತಿಯಿಂದ ಕಮಲೆಯ ಬಾಯಿಯಿಂದ ಅವಳ ಸಂಬಂಧದ ಎಲ್ಲ ಸಂಗತಿಗಳನ್ನೂ ತಿಳಕೊಂಡು, ತನ್ನ ಗಂಡನ ಮುಂದೆ ಹೇಳಿದಳು. ಅಣ್ಣಾರಾಯನು ಕರ್ಮನಿಷ್ಠನು. ಕಾರಣ ಒಬ್ಬ ಬ್ರಾಹ್ಮಣನ ಕಡೆಯಿಂದ ಆಕೆಯ ತಾಯಿಯ ಉತ್ತರ ಕ್ರಿಯೆಯನ್ನು ವಿಧಿ ಪೂರ್ವಕ ಮಾಡಿಸಿದನು.

## [ ೧೪ ]

ಕಮಲೆಯು ಈ ಉದಾರ ದಂಪತಿಗಳ ಆಶ್ರಯದಲ್ಲಿ ತನ್ನ ದುಃಖವನ್ನೆಲ್ಲ ಮರೆತು ಆನಂದದಿಂದ ಕಾಲ ಕಳೆಯ ಹತ್ತಿದಳು; ಮತ್ತು ರಾಮಪೂರಕ್ಕೆ ಆಳು ಕಳುಹಿಸಿದರೂ ಯಾವ ಸುದ್ದಿಯೂ ಗೊತ್ತಾಗದ್ದರಿಂದ ನಿರಾಶಳಾದಳು.

ಆಗ್ಗೆ ಕರ್ನಾಟಕದಲ್ಲಿ ಶ್ರೀಮತ್ ಸಚ್ಚಿದಾನಂದ ಪರಮಹಂಸರೆಂಬ ಯತಿಗಳು ಪ್ರಸಿದ್ಧರಾಗಿದ್ದರು. ಅವರು ವರ್ಷದಲ್ಲಿ ೨-೩ ತಿಂಗಳು ಹಂಪಿಯಲ್ಲಿ ಇರುತ್ತಿದ್ದರು. ಉಳಿದ ದಿವಸಗಳಲ್ಲಿ ತೀರ್ಥಯಾತ್ರೆಗೆ ಹೋಗುತ್ತಿದ್ದರು. ಪರಮಹಂಸರು ಬಡಬಗ್ಗರಿಗೆ ಅನೇಕ ರೀತಿಯಿಂದ ಸಹಾಯಮಾಡುತ್ತಿದ್ದರು. ಈ ಕೆಲಸಕ್ಕಾಗಿ ಅವರು ಸಾವಿರಾರು ರೂಪಾಯಿ ಖರ್ಚುಮಾಡುತ್ತಿದ್ದರು. ಇದರಿಂದ ಜನರ ಮನಸ್ಸಿನಲ್ಲಿ ಸ್ವಾಮಿಗಳಬಳಿಯಲ್ಲಿ ವಿಪುಲವಾಗಿ ಹಣವಿರುವದೆಂಬ ಭಾವನೆಯಿತ್ತು. ಕರ್ನಾಟಕದೊಳಗಿನ ಅನೇಕ ಶ್ರೀಮಂತರೂ ಅಧಿಕಾರಿಗಳೂ ಈ ಸ್ವಾಮಿಗಳ ಶಿಷ್ಯರು; ಆದರೆ ಸ್ವಾಮಿಗಳು ತಮ್ಮ ಶಿಷ್ಯರ ಕಡೆಯಿಂದ ಹಣ ತೆಗೆದುಕೊಳ್ಳುತ್ತಿದ್ದಿಲ್ಲ. ಅಣ್ಣಾರಾವ ಪೋತದಾರನೂ ಈ ಸ್ವಾಮಿಗಳ ಪ್ರಿಯಶಿಷ್ಯರಲ್ಲಿ ಒಬ್ಬನು.

ಪರಮಹಂಸರು ಇಂದು ಹೊಸಪೇಟೆಗೆ ಬಂದು ಅಣ್ಣಾರಾಯನ ಮನೆಯಲ್ಲಿ ಇಳಕೊಂಡಿದ್ದರು. ಗಂಡ-ಹೆಂಡರಿಬ್ಬರಿಗೂ ಸ್ವಾಮಿಗಳ ಮೇಲೆ ಅಚಲವಾದ ಭಕ್ತಿಯಿತ್ತು. ಸ್ವಾಮಿಗಳ ಶುಭಾಗಮನದ ಮೂಲಕ ಅಂದಿನ ದಿವಸ ಅಣ್ಣಾರಾಯನು ಕಚೇರಿಗೆ ಹೋಗಲಿಲ್ಲ. ಪರಮಹಂಸರೂ ಅಣ್ಣಾರಾಯರೂ ಊಟಕ್ಕೆ ಕುಳಿ

ತರು. ಇಂದಿರಾಬಾಯಿಯು ಊಟಕ್ಕೆ ಬಡಿಸಹತ್ತಿದಳು. ಸ್ವಾಮಿಗಳು ಇವರ ಮನೆಗೆ ಅನೇಕಸಾರೆ ಬಂದು ಹೋಗಿದ್ದರು.ಕಾರಣ, ಇವರ ಮನೆತನದ ಎಲ್ಲ ಜನರ ಪರಿಚಯವಿತ್ತು. ಅವರು ಇಂದು ಕಮಲೆಯನ್ನು ಹೊಸದಾಗಿ ನೋಡಿ, ಅವರು ಇಂದಿರಾಬಾಯಿಯನ್ನು ಕುರಿತು—ತಂಗೀ, ಇವಳು ಯಾರು? ಎಂದು ಕೇಳಿದರು.

ಇಂದಿರಾಬಾಯಿ—ಸ್ವಾಮಿ, ಇವಳು ನಮ್ಮ ಸಾಕು ಮಗಳು.

ಪರಮಹಂಸ—ಏನೂ ಅಡ್ಡಿ ಇಲ್ಲ; ನೀವು ಯೋಗ್ಯ ಮಗಳನ್ನು ಜೋಕೆ ಮಾಡಿರುವಿರಿ. ಇವಳ ಮುಖದ ಮೇಲೆ ಸಾತ್ವಿಕ ಕಳೆ ಇರುವದು. ಪ್ರತ್ಯಕ್ಷ ಲಕ್ಷ್ಮಿಯಂತೆ ಇರುವಳು.

ಸ್ವಾಮಿಗಳು ಊಟ ಮಾಡಿ, ಪಡಸಾಲೆಯಲ್ಲಿ ವ್ಯಾಘ್ರಾಸನದಲ್ಲಿ ಕುಳಿತಿದ್ದರು. ಅಣ್ಣಾರಾಯನೂ ಹತ್ತರದಲ್ಲಿಯೇ ವಿಧೇಯನಾಗಿ ಕುಳಿತಿದ್ದನು. ಆಗ ಸ್ವಾಮಿಗಳು ಅವನನ್ನು ಕುರಿತು—ನಿಮಗೆ ಈ ಸಾಕು ಮಗಳು ಎಲ್ಲಿ ದೊರಕಿದಳು? ಎಂದರು. ಆಗ ಅಣ್ಣಾರಾಯನು ಎಲ್ಲ ಸಂಗತಿಯನ್ನೂ ತಿಳಿಸಿ, ಅವಳು ರಾಮಪುರದ ಬಳವಂತರಾಯನ ಮಗಳೆಂಬದನ್ನೂ ಹೇಳಿದನು.

ಬಳವಂತರಾಯನೂ ಸ್ವಾಮಿಗಳ ಪ್ರಿಯಶಿಷ್ಯರಲ್ಲೊಬ್ಬನು. ಬಳವಂತರಾಯನು ಗುಪ್ತರೀತಿಯಿಂದ ಸಂನ್ಯಾಸಿಯ ವೇಷದಿಂದ ಇದ್ದದ್ದು ಆ ಸ್ವಾಮಿಗಳಿಗೆ ಗೊತ್ತಿತ್ತು; ಇಷ್ಟೇ ಅಲ್ಲ, ಅವನು ತನ್ನ ಹೆಂಡತಿಯ ಮರಣ, ಮಗಳ ದರೋಡೆ ಮತ್ತು ಅವಳು ನದಿಯಲ್ಲಿ ಹಾರಿಕೊಂಡದ್ದು ಈ ಎಲ್ಲ ಸಂಗತಿಗಳನ್ನೂ ಪರಮಹಂಸರಿಗೆ ತಿಳಿಸಿದ್ದನು. ಆಗ ಸ್ವಾಮಿಗಳ ಮನಸ್ಸಿನಲ್ಲಿ ಎಲ್ಲ ವಿಚಾರವೂ ಹೊಳೆಯಿತು. ಆಗ ಅವರು ಅಣ್ಣಾರಾಯನನ್ನು ಕುರಿತು—ನಿನ್ನ ನಶೀಬವು ಚಲೋದು. ಅಂತೇ ಈ ಪ್ರಕಾರದ ಸಾಧ್ವೀ ಸಂರಕ್ಷಣೆಯ ಭಾರವು ನಿನ್ನ ಪಾಲಿಗೆ ಬಂದದೆ. ದೇವರ ಲೀಲೆಯು ಅಗಾಧವಾದದ್ದು.

ಆಗ ಅಣ್ಣಾರಾಯನು ವಿಸ್ಮಯದಿಂದ—ಪ್ರಭೋ, ನಿಮಗೆ ಇವಳ ಮನೆಯವರ ಪರಿಚಯವಿದೆ ಏನು? ಎಂದು ಕೇಳಿದನು.

ಪರಮಹಂಸ—ನಿನ್ನಂತೆ ಅವನೂ ನನ್ನ ಶಿಷ್ಯನು. ಅವನು ಬಹಳ ಸಾತ್ವಿಕನೂ, ಉದಾರನೂ ಇರುವನು; ಆದರೆ ಮಾಡುವದೇನು? ದುರ್ದೈವವೆಂಬ ಚಕ್ರದಲ್ಲಿ ಸಿಕ್ಕು ಸದ್ಯಕ್ಕೆ ತಂದೆ-ಮಕ್ಕಳಿಬ್ಬರೂ ಬಹಳ ವಿಪನ್ನಾವಸ್ಥೆಯಲ್ಲಿ ಇರುವರು. ಅವನು ಮಗಳು ಸತ್ತಿರುವಳೆಂದೇ ಭಾವಿಸಿಕೊಂಡಿರುವನು. ಆಗಲಿ, ಮಾಡುವದೇನು? ಎಂದರು.

ಅಣ್ಣಾರಾಯ—ಸ್ವಾಮಿ, ಹುಡಿಗೆಯು ಬಲು ಜಾಣೆಯು. ನಮಗೆ ನಮ್ಮ ಮಕ್ಕಳಿಗಿಂತ ಹೆಚ್ಚು ಪ್ರಿಯಳಾಗಿರುವಳು, ಎಂದನು.

ಪರಮಹಂಸ—ಮಾಯಾ ಎಂಬದು ಬಹಳ ಕೆಟ್ಟ ಗುಣ. ಕಾರಣ ನಾವು ಯಾವ ಪದಾರ್ಥದ ಮೇಲೆಯೂ ಬಹಳ ಮಮತೆ ಮಾಡಬಾರದು. ಯಾಕಂದರೆ ಅದು ದುಃಖಕ್ಕೆ ಕಾರಣವಾಗುವದು. ಇರಲಿ. ನಾನು ಬಳವಂತರಾಯನಿಗೆ ಭೆಟ್ಟಿಯಾಗಿ ಅವನ ಅಭಿಪ್ರಾಯ ತಿಳಕೊಂಡು ಮುಂದಿನ ಕೆಲಸ ಮಾಡುವೆನೆಂದು ಹೇಳಿ, ಕಮಲೆಯ ಗಂಡನಾದ ಮನೋಹರಪಂತನ ಅಲ್ಪ ಪರಿಚಯವನ್ನು ಸಹ ಅಣ್ಣಾರಾಯನಿಗೆ ಹೇಳಿದರು.

ಮುಂದೆ ಎರಡೇ ದಿವಸಗಳಲ್ಲಿ ಪರಮಹಂಸರಿಗೂ, ಬಳವಂತರಾಯನಿಗೂ ಗದಗಿನಲ್ಲಿ ಒಬ್ಬ ವಕೀಲರ ಮನೆಯಲ್ಲಿ ಭೆಟ್ಟಿಯಾಯಿತು.

ನಿರ್ಜನವಾದ ಒಂದು ಕೋಣೆಯಲ್ಲಿ ಪರಮಹಂಸರೂ, ಬಳವಂತರಾಯನೂ ಇಬ್ಬರೇ ಕುಳಿತಿದ್ದರು. ಆಗ ಪರಮಹಂಸರು—ಬಳವಂತರಾವ, ನೀನು ಕಾಳಜಿ ಮಾಡಬೇಡ; ನಿನ್ನ ಮಗಳು ಬದುಕಿರುವಳು. ಅವಳು ನನ್ನ ಶಿಷ್ಯನಾದ ಅಣ್ಣಾರಾಯನ ಮನೆಯಲ್ಲಿ ಮಗಳಂತೆ ಕಾಪಾಡಲ್ಪಡಹತ್ತಿರುವಳು; ಆದರೆ ಅವಳ ಬಗ್ಗೆ ನಾನು ಒಂದು ವಿಚಾರ ಮಾಡಿದ್ದೇನೆ. ಅದಕ್ಕೆ ನಿನ್ನ ಸಮ್ಮತಿಯು ಬೇಕು.

ಬಳವಂತ—ಸ್ವಾಮಿ, ನಾನು ನಿಮ್ಮ ಸೇವಕನು. ನಿಮ್ಮ ಆಜ್ಞೆಯು ನನಗೆ ಶಿರಸಾಮಾನ್ಯವು. ನೀವು ವಿಚಾರಮಾಡಿದ್ದು ಯೋಗ್ಯವೇ ಇರುವದೆಂಬದಕ್ಕೆ ನನ್ನ ನಂಬಿಗೆಯು ಅದೆ.

ಪರಮಹಂಸ—ಹೆಂಗಸರಿಗೆ ತಂದೆಯ ಮನೆಯಲ್ಲಿ ಆದರದಿಂದಲೂ, ಸುಖದಿಂದಲೂ ಇರುವದಕ್ಕಿಂತ, ಗಂಡನ ಮನೆಯಲ್ಲಿ ಅನಾದರದಿಂದಲೂ, ಕಷ್ಟದಿಂದಲೂ ಇರುವದೇ ಸುಖವು.

ಬಳವಂತ—ತಮಗೆ ನಮ್ಮ ಅಳಿಯನ ನೀಚವ್ಯವಹಾರವು ಗೊತ್ತದೆಯಷ್ಟೆ?

ಪಸಮಹಂಸ—ನನಗೆ ಗೊತ್ತಿರುವದು. ನಿಜವಾಗಿಯೂ ವಿಚಾರಮಾಡಿದರೆ, ದುರ್ಮಾರ್ಗಪ್ರವೃತ್ತನಾದ ಪುರುಷನನ್ನು ಹಾದಿಗೆ ತರಲಿಕ್ಕೆ ಅವನ ಸಾಧ್ವಿಯಾದ ಹೆಂಡತಿಯೇ ಯೋಗ್ಯಳು; ಉಳಿದವರಿಂದ ಆಗದು. ಕಮಲೆಯು ಈ ವರೆಗೂ ಸಂಸಾರಸುಖವನ್ನು ಅನುಭವಿಸಿಲ್ಲ; ಪತಿಯ ಪರಿಚಯವಿಲ್ಲ; ಅವಳಲ್ಲಿ ನಾರೀತ್ವದ ಪೂರ್ಣ ವಿಕಾಸವೂ ಆಗಿಲ್ಲ. ಕಾರಣ ಅವಳು ಪತಿಯನ್ನು ಸನ್ಮಾರ್ಗಕ್ಕೆ ಹಚ್ಚುವ ಪ್ರಯತ್ನವನ್ನು ಮಾಡಿಲ್ಲ. ಏನಾದ್ದರೊಂದು ಹಂಚಿಕೆಮಾಡಿ,

ಅವಳನ್ನು ಗಂಡನಮನೆಗೆ ಕಳಿಸಲಿಕ್ಕೇಬೇಕು. ಅವಳು ನಿಜವಾಗಿಯೂ ಗಂಡ ನನ್ನು ಹಾದಿಗೆ ತರುವಳು.

ಬಳವಂತ—ತಮ್ಮ ಆಜ್ಞೆಯಂತೆ ನಡೆಯುವೆನು; ಆದರೆ ಅವಳನ್ನು ಕುಕ ನೂರತನಕ ಹೋಗಿ ಕಳಿಸಿ ಬರುವವರು ಯಾರು?

ಪರಮಹಂಸ—ಕಳಿಸುವ ಎಲ್ಲ ವ್ಯವಸ್ಥೆಯನ್ನೂ ಅಣ್ಣಾರಾಯನು ಮಾಡುವನು; ಆದರೆ ಯಾರಾದರೂ ನಿಮ್ಮ ಕಡೆಯವರೊಬ್ಬರು ನಿಮ್ಮ ಅಳಿಯನ ಗುರ್ತಿನವರು ಮಾತ್ರ ಸಂಗಡ ಹೋಗಲಿಕ್ಕೆಬೇಕು.

ಬಳವಂತರಾಯನು ಕೆಲಹೊತ್ತು ಆಲೋಚಿಸಿ, ನಂತರ—"ಕೃಷ್ಣಪುರದಲ್ಲಿ ಬಸವಂತನೆಂಬವನೊಬ್ಬನು ಮಾತ್ರ ನಮ್ಮ ನಂಬಿಗಸ್ತನಿರುವನು. ಅವನು ಬೇರೆ ಜಾತಿಯವನಾದರೂ, ಮನೆಯವನಂತೆ ಇರುವನು. ಅವನ ಪರಿಚಯವು ನಮ್ಮ ಅಳಿಯನಿಗೆ ಇರುವದು. ಅವನು ಕಮಲೆಯನ್ನು ಅಕ್ಕನಂತೆ ಭಾವಿಸಿರುವನು. ಈ ಕೆಲಸಕ್ಕೆ ಅವನೇ ಯೋಗ್ಯನು; ಅವನನ್ನು ಇಲ್ಲಿಗೆ ಕರಕೊಂಡು ಬರುವೆನು," ಎಂದನು.

ಪರಮಹಂಸ—ನೀನು ಹೇಳಿದ್ದು ಯೋಗ್ಯವಾಗುವದು. ನೀನು ಕೃಷ್ಣ ಪುರಕ್ಕೆ ಹೋಗಿ ಬಸವಂತನನ್ನು ಹೊಸಪೇಟೆಯ ಮಾಮಲೇದಾರನ ಮನೆಗೆ ಕಳುಹಿಸು. ಅವರು ಎಲ್ಲ ವ್ಯವಸ್ಥೆಯನ್ನೂ ಮಾಡುವರು.

## [ ೨೦ ]

...

ಬಳವಂತರಾಯನು ಪರಮಹಂಸರ ಹೇಳಿಕೆಯಮೇರೆಗೆ ಒಂದುದಿನ ಮಧ್ಯ ರಾತ್ರಿಯಸುಮಾರಿಗೆ ಕೃಷ್ಣಪುರಕ್ಕೆಹೋಗಿ ಎಲ್ಲ ಸಂಗತಿಯನ್ನೂ ಹೇಳಿ, ಬಸವಂತ ನಿಗೆ ಹೊಸಪೇಟೆಯ ಮಾಮಲೇದಾರರ ಮನೆಗೆ ಹೋಗಲಿಕ್ಕೆ ತಿಳಿಸಿದನು; ಮತ್ತು ಕಮಲೆಯನ್ನು ಬಸವಂತನಸಂಗಡ ಗಂಡನಮನೆಗೆ ಕಳುಹಿಸಬೇಕೆಂದು ಹೊಸಪೇಟೆ ಯ ಅಣ್ಣಾರಾಯನ ಹೆಸರಿನಿಂದ ಒಂದು ಪತ್ರ ಬರೆದನು. ಅಣ್ಣಾರಾಯನು ಬಳ ವಂತರಾಯನ ಪತ್ರದ ಪ್ರಕಾರ ಕಮಲೆಯನ್ನು ಕಳಿಸಬೇಕೆಂದು ನಿರ್ಧರಿಸಿದನು.

ಮರುದಿವಸವೇ ಬಳವಂತರಾಯನು ಬಸವಂತನನ್ನು ಕರಕೊಂಡು ಅಣ್ಣಾ ರಾಯರ ಮನೆಗೆ ಬಂದನು. ಆತನ ಇಚ್ಛೆಯ ಪ್ರಕಾರ ಹೊರಗಿನ ಕೋಣೆಯಲ್ಲಿ

ಅವನ ಇಳಿದುಕೊಳ್ಳುವ ವ್ಯವಸ್ಥೆ ಮಾಡಲ್ಪಟ್ಟಿತು; ಕಮಲೆಯು ತಂದೆಯು ಮೃತನಾದನೆಂದೇ ಭಾವಿಸಿದ್ದಳು. ಸದ್ಯಕ್ಕೆ ಮಗಳಿಗೆ ತನ್ನ ಪರಿಚಯುವನ್ನು ಮಾಡಿಕೊಡವಿರುವದೇ ಯೋಗ್ಯವೆಂದು ತಿಳಿದು, ಅವನು ಹೊರಗಿನ ಕೋಣೆ ಯಲ್ಲಿಯೇ ಸ್ವಯಂಪಾಕ ಮಾಡಿಕೊಂಡು, ಅಣ್ಣಾರಾಯನಿಗೆ ಹೇಳತಕ್ಕದ್ದನ್ನು ಹೇಳಿ, ಹೊರಟುಹೋದನು.

ಇತ್ತ ಕಮಲೆಯು ಒಮ್ಮಿಂದೊಮ್ಮೆಲೆ ಬಸವಂತನನ್ನು ಕಂಡು ಆಶ್ಚರ್ಯ ದಿಂದ—"ಇದೇನು ಬಸವಂತಾ, ನೀನು ಇಲ್ಲಿಗೆ ಹೇಗೆ ಬಂದಿ?

ಬಸವಂತನು ಅಕ್ಕನಿಗೆ ನಮಸ್ಕಾರ ಮಾಡಿ—ಅಕ್ಕಾ, ನಮ್ಮ ದೇಸಾಯಿ ಯರಾದ ಭುಜಂಗರಾಯರಿಗೂ, ಈ ಮಾಮಲೇದಾರರಿಗೂ ಅತಿ ಸ್ನೇಹವಿರು ತ್ತದೆ. ನಾನು ಭುಜಂಗರಾಯರ ಆಜ್ಞೆಯ ಮೇರೆಗೆ ನಿನ್ನನ್ನು ಕುಕುನೂರಿಗೆ ಕರಕೊಂಡು ಹೋಗಲಿಕ್ಕೆ ಬಂದಿರುವೆನು. ದೇಸಾಯಿಯರು ಎಲ್ಲ ವ್ಯವಸ್ಥೆ ಯನ್ನು ಮಾಡಲಿಕ್ಕೆ ಇವರಿಗೆ ಪತ್ರ ಬರೆದಿರುವರಂತೆ.

ಕಮಲೆ—ಹಾಗಾದರೆ ನಾವು ಮೊದಲು ರಾಮಪುರಕ್ಕೆ ಹೋಗಿ, ದೇಸಾ ಯಿಯರ ಭೆಟ್ಟಿಯಾಗಿ, ನಂತರ ಕುಕುನೂರಿಗೆ ಹೋಗೋಣ.

ಬಸವಂತ—ಅಕ್ಕಾ, ಹಾಗೆ ಬೇಡ; ಪಂತರಿಗೆ ಸ್ವಲ್ಪ ಅಜಾರಿಯಾಗಿದೆ ಯಂತೆ; ಮನೆಯಲ್ಲಿ ಮಾಡುವವರು ಯಾರೂ ಇಲ್ಲ. ಕಾರಣ ಅವರು ನಮ್ಮ ದೇಸಾಯಿಯರಿಗೆ ಪತ್ರ ಬರೆದಿರುವರು. ಆದ್ದರಿಂದ ನಾವು ಅಲ್ಲಿಗೇ ಹೋಗೋಣ.

ಗಂಡನಿಗೆ ಸ್ವಲ್ಪ ಅಜಾರಿಯಾಗಿದೆ, ಎಂದು ಕೇಳಿದ ಕೂಡಲೆ ಅವಳ ಮನಸ್ಸು ಅಧೀರವಾಯಿತು. ಆಗ ಅವಳು ಹಾಗೇ ಆಗಲಿ, ಎಂದಳು.

ಅಣ್ಣಾರಾಯರು ಒಂದು ಉತ್ತಮವಾದ ಸವಾರೀಬಂಡಿಯನ್ನು ಸಜ್ಜು ಮಾಡಿಸಿದರು. ಇಂದಿರಾಬಾಯಿಯು ಕಮಲೆಗೆ ಹೊಸ ಸೀರೆ ಉಡಿಸಿ, ಆಭರಣ ಗಳನ್ನು ಇಟ್ಟುಕೊಳ್ಳಲಿಕ್ಕೆ ಕೊಟ್ಟಳು.

ಕಮಲೆಯು ದೇವರಿಗೆ ನಮಸ್ಕಾರಮಾಡಿ ಹೊರಗೆ ಇಂದಿರಾಬಾಯಿಗೆ ನಮ ಸ್ಕಾರ ಮಾಡಲಿಕ್ಕೆ ಬಂದಳು. ಅವಳ ಎರಡೂ ಕಣ್ಣುಗಳು ನೀರಿನಿಂದ ತುಂಬಿದವು. ಗದ್ಗದಸ್ವರದಿಂದ"ಅವ್ವಾ" ಎಂದಳು; ಮುಂದೆ ಮಾತುಗಳೇ ಹೊರಡಲಿಲ್ಲ.

ಇಂದಿರಾಬಾಯಿಗೂ ಬಹಳ ಕಷ್ಟವಾಯಿತು. ಅವಳು ಕಷ್ಟವನ್ನು ನುಂಗಿ ಕೊಂಡು ಧೈರ್ಯದಿಂದ—ಮಗೂ ಕಮಲಾ, ಗಂಡನ ಮನೆಗೆ ಹೋಗುವಾಗ ಅಳಬಾರದವ್ವಾ! ಗಂಡನ ಮನೆ ಎಂದರೆ, ಹೆಂಗಸರಿಗೆ ತೀರ್ಥವು. ಅಂಥ ಪವಿತ್ರ ಸ್ಥಳಕ್ಕೆ ಹೋಗುವಾಗ ಅಳುವರೇನು?

ಕಮಲೆಯು ದುಃಖವನ್ನು ನುಂಗಿಕೊಂಡು, ಇಂದಿರಾಬಾಯಿಗೆ ನಮಸ್ಕಾರ ಮಾಡಿದಳು; ಇಂದಿರಾಬಾಯಿಯು ಪ್ರೇಮಪೂರ್ವಕ ಆಶೀರ್ವಾದ ಮಾಡಿದಳು.

ಕಮಲೆಯು ಇಂದಿರಾಬಾಯಿಯನ್ನು ಕುರಿತು—ಅವ್ವಾ, ನನ್ನನ್ನು ಮತ್ತೆ ಎಂದು ಕರೆಯಿಸುವಿ?

ಇಂದಿರಾ—ಮಗಳೇ, ಚಿಂತೆ ಮಾಡಬೇಡ; ನಡುನಡುವೆ ನಾನು ಜನರನ್ನು ಕಳುಹಿಸಿ ನಿನ್ನ ಸುದ್ದಿಯನ್ನು ತಿಳಿದುಕೊಳ್ಳುವೆನು; ಇಲ್ಲವೆ ವಾರಕ್ಕೊಂದರಂತೆ ಪತ್ರ ಹಾಕಿಸುವೆನು. ತಪ್ಪದೆ ಉತ್ತರ ಬರಿ.

ಅನಂತರ ಕಮಲೆಯು ಹೊರಗಿನ ಕೋಣೆಗೆ ಬಂದು ಅಣ್ಣಾರಾಯನಿಗೆ ನಮಸ್ಕಾರ ಮಾಡಿದಳು. ಅವನು ಎಷ್ಟು ಪ್ರಯತ್ನಪಟ್ಟರೂ, ಕಣ್ಣೊಳಗೆ ನೀರು ಬಂದವು. ಅವನ್ನು ತೋರಗೊಡದೆ, ಮುಖವನ್ನು ಹಿಂದಕ್ಕೆ ತಿರುಗಿಸಿ ಕಣ್ಣು ಒರಿಸಿಕೊಂಡು, ಪ್ರೀತಿಯಿಂದ ಆಶೀರ್ವಾದವನ್ನು ಮಾಡಿದನು.

ಗಂಡ-ಹೆಂಡರಿಬ್ಬರೂ ಊರು ದಾಟುವತನಕ ಅವಳನ್ನು ಕಳಿಸಿ, ಉದಾಸ ಮನಸ್ಸಿನಿಂದ ಮನೆಗೆ ತಿರುಗಿ ಬಂದರು.

## [ ೨೧ ]

ಸೂರ್ಯನು ಮುಳುಗಿ ಬಹಳ ಹೊತ್ತಾಗಿದ್ದಿಲ್ಲ. ದನಕರುಗಳು ಅದೇ ಊರೊಳಗೆ ಬರಹತ್ತಿದ್ದವು. ಜನರು ದೀಪಹಚ್ಚಲಿಕ್ಕೆ ಆರಂಭಮಾಡಿದ್ದರು. ಈ ಸಮಯದಲ್ಲಿ ಒಂದು ಕೊಲ್ಲಾರಿಯ ಬಂಡಿಯು ಕುಕುನೂರಲ್ಲಿಯ ಪಂತರ ಮನೆಯ ಬಾಗಿಲಿಗೆ ಬಂದು ನಿಂತಿತು. ಬಂಡಿಯ ಸಪ್ಪಳವನ್ನು ಕೇಳಿದ ಕೂಡಲೆ ಮನೋಹರಪಂತನು ಹೊರಗೆ ಕಟ್ಟೆಯಮೇಲೆ ಬಂದುನಿಂತನು. ಬಂಡಿಯು ಆತನ ಮನೆಯ ಮುಂದೇ ಬಂದು ನಿಂತಿತು. ಬಂಡಿಯ ಮುಂದೆ ಇಬ್ಬರು ಸಿಪಾಯಿಯರು ನಿಂತಿದ್ದರು. ಸಿಪಾಯಿಯರನ್ನು ನೋಡಿದ ಕೂಡಲೆ ಅವನು ಸ್ವಲ್ಪ ಅಂಜಿದನು. ತಾನು ಬಳವಂತರಾಯನ ಮನೆ ಬರಕೊಟ್ಟದ್ದರ ಸಲುವಾಗಿ ಏನಾದರೂ ವಿಪರೀತ ಪ್ರಸಂಗ ಒದಗಿರಬಹುದೋ ಏನೋ ಎಂಬ ವಿಚಾರವು ಹುಟ್ಟಿತು. ಆದರೂ ಧೈರ್ಯತಂದುಕೊಂಡು—ನೀವು ಯಾವ ಊರವರು? ಯಾರ ಮನೆಗೆ ಬಂದಿರುವಿರಿ? ಎಂದು ಕೇಳಿದನು.

ಬಸವಂತ—ನಾವು ಮನೋಹರಪಂತರ ಮನೆಗೆ ಬಂದಿರುವೆವು.

ಆಗ ಪಂತನು ಮನಸ್ಸಿನಲ್ಲಿ—ನಮ್ಮ ಮನೆಗೆಬಂದವರು ಯಾರಿರಬಹುದು? ಅವರ ಸಂಗಡ ಪೋಲೀಸ ಶಿಪಾಯರೇಕೆ? ಎಂದು ವಿಚಾರ ಮಾಡ ಹತ್ತಿದನು. ಕಡೆಗೆ ಅವರನ್ನು ಕುರಿತು—"ನೀವು ಯಾವ ಊರಿಂದ ಬಂದಿರಿ?"

ಬಸವಂತ—ನಾವು ರಾಮಪುರದಿಂದ ಬಳವಂತರಾಯನ ಮನೆಯಿಂದ ಬಂದಿರುವೆವು.

ಪಂತ—ಬಂಡಿಯಲ್ಲಿ ಯಾರು ಇರುವರು?

ಬಸವಂತ—ನಿಮ್ಮ ಪರಿವಾರವು.

ಪಂತ—ಯಾರು ಬಸವಂತನೇನು?

ಬಸವಂತ—ಹೌದು; ಇನ್ನೂ ನನ್ನ ಗುರುತು ಹತ್ತಲಿಲ್ಲವೇ? ಎಂದು ಹೋಗಿ ಅವನಿಗೆ ನಮಸ್ಕಾರ ಮಾಡಿದನು.

ಬಸವಂತನು ಬಂಡಿಯ ಎತ್ತು ಬಿಡಲಿಕ್ಕೆ ಹೇಳಿದನು. ಇತ್ತ ಪಂತನು ಒಳಗೆ ಹೋಗಿ ತಮ್ಮ ಅಕ್ಕನನ್ನು ಹೊರಗೆ ಕಳುಹಿಸಿದನು. ಆ ಮುದುಕೆಯು ವಸ್ತ್ರಾಲಂಕಾರ ಭೂಷಿತಳೂ ರೂಪಲಾವಣ್ಯ ಸಂಪನ್ನಳೂಆದ ಕಮಲೆಯ ಗುರುತು ಹಿಡಿಯಲಿಲ್ಲ. ಕಮಲೆಯು ಅತ್ತಿಗೆಗೆ ನಮಸ್ಕಾರ ಮಾಡಿದಳು. ಆಗ ಅವಳು ಕಮಲೆಯನ್ನು ಕುರಿತು—ನೀವು ಯಾವ ಊರವರವ್ವಾ? ಎಂದು ಕೇಳಿದಳು.

ಆಗ ಕಮಲೆಯು ಮನಸ್ಸು ಗಟ್ಟಿಮಾಡಿ—ನಾನು ನಿಮ್ಮ ನಾದಿನೆಯು, ಕಮಲೆಯು, ಎಂದಳು.

ಆಗ ಮುದುಕೆಯು ಆನಂದದಿಂದ ಅವಳ ಬೆನ್ನ ಮೇಲೆ ಕೈಯಾಡಿಸುತ್ತ—ಕಮಲಾ, ನೀನೇ? ಹೊರಗೆ ಕತ್ತಲವಿದ್ದದರಿಂದ ನಿನ್ನ ಗುರುತು ಹತ್ತಲಿಲ್ಲ. ನನ್ನ ದೃಷ್ಟಿಯೂ ಈಗ ಮಂದವಾಗಿದೆ, ಎಂದು ಹೇಳಿ, ಅವಳ ಕೈ ಹಿಡಕೊಂಡು ಒಳಗೆ ಕರಕೊಂಡು ಹೋಗಿ, ಒಂದು ಕಂಬಳಿಯನ್ನು ಹಾಸಿ ಕೂತುಕೋ, ಎಂದಳು. ಆಗ ಅವಳ ಕಣ್ಣುಗಳಲ್ಲಿ ನೀರು ಬಂದವು. ಸೆರಗಿನಿಂದ ಕಣ್ಣು ಒರಿಸಿಕೊಳ್ಳುತ್ತ ಅವಳು—ನಮ್ಮ ಮನೋಹರನಿಗೆ ಈಗ ಬುದ್ಧಿ ಬಂದಿದೆ, ನೀನು ಬಂದದ್ದು ಬಹಳ ಚಲೋದಾಯಿತು.

ಕಮಲೆ—ಅವ್ವಾ, ನಾನು ಅಲ್ಲಿ ಇದ್ದು ಮಾಡುವದೇನು? ನಿಮ್ಮಂಥ ಹಿರಿಯರ ಸೇವಾ-ಶುಶ್ರೂಷಣೆ ಮಾಡುವದು ನನ್ನ ಕರ್ತವ್ಯವಲ್ಲವೇ?

ಆಗ ಮುದುಕೆಯು ಗದ್ಗದ ಸ್ವರದಿಂದ—ಮಗೂ ನೀನು ಬಲು ಬುದ್ಧಿವಂತೆ, ಸೌಭಾಗ್ಯಲಕ್ಷ್ಮಿಯು. ದೇವರು ನಿನಗೆ ಅಖಂಡ ಸೌಭಾಗ್ಯವನ್ನು ಕೊಡಲಿ. ಇರಲಿ; ನೀರು ತಂದು ಕೊಡುತ್ತೇನೆ. ಕಾಲು ತೊಳೆದುಕೊಂಡು, ಮೊದಲು ಸ್ವಲ್ಪ ನೀರು ಕುಡಿ, ಎಂದಳು.

ಇತ್ತ ಪಂತನು ಹೊರಗೆ ಹೋಗಿ ನೋಡಿದನು; ಸಿಪಾಯರೂ ಇದ್ದಿಲ್ಲ. ಬಂಡಿಯೂ ಇದ್ದಿಲ್ಲ. ಬಸವಂತನೊಬ್ಬನೇ ಇದ್ದನು. ಆಗ ಅವನು ಬಸವಂತನನ್ನು ಕುರಿತು—ಬಂಡಿಯುವರು ಬಾಡಿಗೆ ತೆಗೆದುಕೊಳ್ಳದೆ ಹೊರಟು ಹೋದರಲ್ಲ? ಎಂದು ಕೇಳಿದನು.

ಬಸವಂತ—ಅದು ನಮ್ಮ ದೇಸಾಯಿಯುರ ಬಂಡಿಯು.

ಪಂತನು ಬಸವಂತನನ್ನು ಒಳಗೆ ಕರೆದುಕೊಂಡು ಹೋದನು.

ಇತ್ತ ಆ ಮುದುಕೆಯು ಅಡಿಗೆ ಮಾಡಲಿಕ್ಕೆ ಅಡಿಗೆಯುಮನೆಗೆ ಹೊರಟಳು. ಕಮಲೆಯು ಅವಳನ್ನು ತಡೆದು — ನಾನು ಇರಲಿಕ್ಕೆ ರಾತ್ರಿವೇಳೆಯಲ್ಲಿ ನೀವು ಅಡಿಗೆ ಮಾಡುವದು ಯೋಗ್ಯವೇ? ಎಂದು ಕೇಳಿದಳು.

ಹಾಗೆ ಆಗಲಿ, ನೀನೇ ಮಾಡು; ಆದರೆ ಮೊದಲು ಸ್ವಲ್ಪ ನೀರು ಕುಡಿ, ಎಂದು ಹೇಳಿ, ಒಂದು ಹೆಸರಿಟ್ಟಿನ ಉಂಡಿಯುನ್ನು ಕೊಟ್ಟಳು. ಕಮಲೆಗೆ ಆ ಉಂಡಿಯು ಅಮೃತಕ್ಕಿಂತ ರುಚಿ ಹತ್ತಿತು!

ಕಮಲೆಯು ಅಡಿಗೆಯ ಮನೆಗೆ ಹೋಗಿ ಅಡಿಗೆ ಮಾಡಲಿಕ್ಕೆ ಸುರುವು ಮಾಡಿದಳು. ಆಗ ಬಸವಂತನು ಬಂದು—ಅಕ್ಕಾ ಇದೇನು ನಡೆಯಿಸಿರುವಿರಿ? ನೋಡು, ಮನೆಯ ಕಾಳಜಿಯು ಎಷ್ಟು ಹತ್ತಿರುವದು? ಈಗ ನೋಡಿದರೆ ಅನ್ನಪೂರ್ಣಾದೇವಿಯುನ್ನು ನೋಡಿದಂತೆ ಆಗುತ್ತದೆ.

ಕಮಲೆ—ತಮ್ಮಾ ಇಂದು ನಾನು ನನ್ನ ಸ್ವಂತ ಮನೆಯಲ್ಲಿ ಸ್ವತಃ ಅಡಿಗೆ ಮಾಡಿ ನಿನಗೆ ಊಟಕ್ಕೆ ಹಾಕುತ್ತೇನೆ, ತಿಳಿಯಿತೇ? ಎಂದಳು.

ಊಟ ಮಾಡಿದ ನಂತರ ಪಂತನು ಮಲಗುವ ಕೋಣೆಯಲ್ಲಿ ಕುಳಿತು ಹೆಂಡತಿಯು ಮಾರ್ಗನಿರೀಕ್ಷಣೆ ಮಾಡಹತ್ತಿದನು. ಈಗ ಬರಬಹುದು; ಇನ್ನೊಂದು ಘಳಿಗೆಗೆ ಬರಬಹುದು, ಎಂದು ಉತ್ಕಟೇಚ್ಛೆಯಿಂದ ಬಾಗಿಲದ ಕಡೆಗೆ ನೋಡುತ್ತ ಕುಳಿತಿದ್ದನು. ಇದೇ ಪಂತನು ಹಿಂದಕ್ಕೊಮ್ಮೆ ಅಪರಾಧವಿಲ್ಲದೆ ಸಾಮಾನ್ಯ ಹಣದ ಸಲುವಾಗಿ ತಿರಸ್ಕಾರ ಮಾಡಿ, ಅವಳ ಸಂಗಡ ನರಪಶುವಿನಂತೆ ಆಚರಿಸಿದ್ದನು. ಈಗ ಅವನು ತನ್ನ ಹಿಂದಿನ ಅಪರಾಧದ ಬಗ್ಗೆ ಹೆಂಡತಿಯು ಕ್ಷಮೆ ಬೇಡಿಕೊಳ್ಳಬೇಕೆಂದು ನಿರ್ಧಾರ ಮಾಡಿದ್ದನು.

ಕಮಲೆಯು ಮನೆಯ ಎಲ್ಲ ಕೆಲಸಗಳನ್ನು ತೀರಿಸಿಕೊಂಡು ಗಂಡನು ಮಲಗುವ ಕೋಣೆಗೆ ಬಂದಳು; ಕೋಣೆಯೊಳಗೆ ಬಂದು ಗಂಡನಿಗೆ ನಮಸ್ಕಾರ ಮಾಡಿ, ವಿನಯದಿಂದ ತಲೆಬಾಗಿಸಿ ನಿಂತುಕೊಂಡಳು.

ಪಂತನಿಗೆ ಬಹಳೇ ಸಂಕೋಚವಾಗಹತ್ತಿತು. ಅವನು ಮನಸ್ಸು ಗಟ್ಟಿ ಮಾಡಿ—ಕಮಲಾ, ನಾನು ನಿನ್ನ ವಿಷಯದಲ್ಲಿ ಬಹಳ ಅಪರಾಧಿಯು.

ಕಮಲೆ —ನಾನೂ ನಿಮ್ಮ ವಿಷಯದಲ್ಲಿ ಅಪರಾಧಿ ಇರುವೆನು.

ಪಂತ —ಇಲ್ಲ; ನಿನ್ನ ತಪ್ಪಿಲ್ಲ. ನೀನು ನನ್ನ ಅಪರಾಧವನ್ನು ಕ್ಷಮೆಮಾಡಿದೆನೆಂದು ಒಮ್ಮೆ ಹೇಳು. ಅಂದರೆ ನನಗೆ ಸಮಾಧಾನವಾಗುವದು.

ಕಮಲೆ—ನೀವೂ ನನ್ನಂಥನಿರ್ಭಾಗ್ಯಳ ತಪ್ಪನ್ನು ಕ್ಷಮಿಸಿದೆನೆಂದು ಹೇಳಿರಿ.

ಪಂತ( ಕೈ ಹಿಡಿದು ಅವಳನ್ನು ಹತ್ತರ ಕುಳ್ಳಿರಿಸಿಕೊಂಡು )—ಕಮಲೆ, ಈ ವರೆಗೆ ಎಲ್ಲವೂ ಕ್ಷೇಮವಿತ್ತಷ್ಟೇ?

ಕಮಲೆ—ನಿಮ್ಮ ಅನುಗ್ರಹವಿದ್ದ ಮೇಲೆ ಯಾತರ ಚಿಂತೆ?

ಹೆಂಡತಿಯ ಮಾತುಗಳು ಪಂತನಿಗೆ ತಿರಸ್ಕಾರದಂತೆ ತೋರಿದವು. ಆಗ ಅವನು ಹೆಂಡತಿಯ ಮುಖದ ಕಡೆಗೆ ನೋಡಿದನು. ಆ ಮುಖದ ಭಾವದಲ್ಲಿ ತಿರಸ್ಕಾರದ ಅಂಶವೇ ಇದ್ದಿಲ್ಲ. ಅವಳ ಆಭರಣಗಳನ್ನು ನೋಡಿ, ಇವು ಹೇಗೆ ಬಂದವೆಂದು ಒಮ್ಮೆ ಮನಸ್ಸಿನಲ್ಲಿ ಬಂತು; ಆದರೆ ಮನಸ್ಸಿಲ್ಲಿಯೇ ನಾಚಿಕೆ ಹುಟ್ಟಿ ಕೇಳುವ ಧೈರ್ಯವಾಗಲಿಲ್ಲ; ತಂದೆ-ತಾಯಿಗಳ ಮರಣದ ತರುವಾಯ ಉಳಿದ ಆಸ್ತಿಯನ್ನು ಮಾರಿ ಮಾಡಿಸಿರಬಹುದೆಂದು, ಭಾವಿಸಿದನು.

ಕಮಲೆಯು ಗಂಡನ ಕೈ ಹಿಡಿದು ಕಾತರಭಾವದಿಂದ ಆತನ ಮುಖದ ಕಡೆಗೆ ನೋಡುತ್ತ—ನಾನು ನಿಮ್ಮ ಚರಣಸೇವಕಳು. ನನ್ನದೊಂದು ಮಾತು ಕೇಳುವಿರೇನು?

ಪಂತ—ತಪ್ಪದೆ ಕೇಳುವೆನು. ನಾನು ಮೊದಲಿನ ಪಂತನಲ್ಲ.

ಕಮಲೆ—ಇದೇ ಪ್ರಕಾರ ಕಡೆತನಕ ನನಗೆ ನಿಮ್ಮ ಚರಣದಲ್ಲಿ ಆಶ್ರಯ ಕೊಡುವಿರಷ್ಟೆ?

ಪಂತ —ಕಮಲೆ, ಹೀಗೇಕೆ ಮಾತಾಡುತ್ತೀ? ನಾನು ಈ ವರೆಗೆ ವಿಚಾರಹೀನನಾಗಿ ನಿನ್ನಂಥ ಸುಗುಣಿಯಾದ ಹೆಂಡತಿಯ ಬೆಲೆಯನ್ನು ತಿಳಿಯದೆ, ನಿನ್ನ ಸಂಗಡ ಬಹಳ ನಿಷ್ಠುರವಾಗಿ ನಡೆದುಕೊಂಡೆನು. ನನ್ನ ಪಾಪಕ್ಕೆ ಅಳತೆಯಿಲ್ಲ. ನೀನು ಗಂಡನೆಂದು ತಿಳಿದು ನನ್ನನ್ನು ಕ್ಷಮಿಸಬಹುದು; ಆದರೆ ದೇವರು ಕ್ಷಮಿಸ

ಲಿಕ್ಕಿಲ್ಲ. ಪಂತನ ಮಾತುಗಳು ನಿಜವಾಗಿಯೂ ಅವನ ಹೃದಯದೊಳಗಿಂದ ಬರುತ್ತಿದ್ದವು. ಅವನ ಕಣ್ಣೊಳಗೆ ನೀರು ಬರಹತ್ತಿದವು.

ಕಮಲೆಯು ತನ್ನ ಸೆರಗಿನಿಂದ ಅವನ ಕಣ್ಣು ಬರಿಸುತ್ತ—ನೀವು ನನಗೆ ದೇವರು, ಗುರುಗಳು, ಹಿರಿಯರು, ನನ್ನ ಸರ್ವಸ್ವವೆಂದರೆ, ನೀವೇ. ಅಂದಬಳಿಕ ನೀವು ಏನೇ ಮಾಡಲಿ, ಅದು ನನ್ನ ಕಲ್ಯಾಣದ ಸಲುವಾಗಿಯೇ ಅದೆ. ಯಾತರಿಂದ ನಿಮಗೆ ಸುಖವಾಗುವದೋ, ಆನಂದವಾಗುವದೋ ಅದೇ ನನಗೆ ಸುಖವು. ನಿಮ್ಮ ಆನಂದಪೂರ್ಣ ಮುಖವನ್ನು ನೋಡುವದೇ ನನಗೆ ಆನಂದವು, ಇರಲಿ. ಹಿಂದಿನದೆಲ್ಲ ಮರೆತು ಬಿಡಿರಿ, ಇನ್ನು ಸುಖದಿಂದ ಇರೋಣ.

ಪತ್ನಿಯ ಈ ಉದಾತ್ತ ವಿಚಾರದ ಮಾತುಗಳನ್ನು ಕೇಳಿ ಪಂತನಿಗೆ ಬಹಳ ಆನಂದವಾಯಿತು. ಅವನು ದೇವರು ತನಗೆ ಒಂದು ಉತ್ತಮವಾದ ರತ್ನವನ್ನೇ ಕೊಟ್ಟಿರುವನೆಂದು ಭಾವಿಸಿದನು. ಅವನು ಮನಸ್ಸಿನಲ್ಲಿ—ನಾನು ಹಿಂದಕ್ಕೊಮ್ಮೆ ಈ ರತ್ನದ ಬೆಲೆಯನ್ನು ತಿಳಿಯದೆ ಕಳಕೊಂಡಿದ್ದೆನು. ಈ ಸಾರೆ ಬಹಳ ವಿಚಾರದಿಂದ ಈ ರತ್ನವನ್ನು ಜೋಪಾನ ಮಾಡಬೇಕೆಂದು ಭಾವಿಸಿಕೊಂಡನು. ಆಗ ಪ್ರೀತಿಯಿಂದ ಅವನು ಹೆಂಡತಿಯನ್ನು ಚುಂಬಿಸಿ, ಅವಳ ಗಾಢಾಲಿಂಗನದ ಪ್ರೇಮಪಾಶದಲ್ಲಿ ಬದ್ಧನಾದನು.

ಮರುದಿವಸ ಬೆಳಗುಮುಂಜಾನೆ ಕಮಲೆಯು ನಸುಕಿನಲ್ಲೆದ್ದು, ಮನೆಯ ಕಸತೆಗೆದು, ಹೊಸ್ತಿಲ ಸಾರಿಸಿ ರಂಗವಲ್ಲಿಯನ್ನು ಹಾಕಿದಳು.

ಇತ್ತ ಬಸವಂತನೂ ನಸುಕಿನಲ್ಲಿ ಎದ್ದು ಮುಖ ತೊಳೆದುಕೊಂಡು ತಂಬಾಕ ಸೇದುವದರಲ್ಲಿ ತೊಡಗಿದ್ದನು. ಕಮಲೆಯು ಅಲ್ಲಿಗೆ ಬಂದು ಅವನ ಕೈಯಲ್ಲಿ ಒಂದು ರೂಪಾಯಿ ಕೊಟ್ಟು—ಬಸವಂತಾ, ನೀನು ಇನ್ನು ಸ್ವಲ್ಪ ಹೊತ್ತಿನ ಮೇಲೆ ಪೇಟೆಗೆ ಹೋಗಿ, ಕಾಯಿ, ಪಲ್ಲೆ, ಬೆಣ್ಣೆ, ಬೆಲ್ಲ ಮುಂತಾದ ಸಾಮಾನುಗಳನ್ನು ತೆಗೆದುಕೊಂಡು ಬಾ, ಎಂದಳು.

ಬಸವಂತನು ಮನಸ್ಸಿನಲ್ಲಿ—ಅಹಾ ನೋಡಿರಿ. ಸಂಸಾರದ ಮಾಯೆ ಎಂಬದು ಎಂಥ ವಿಚಿತ್ರವಿರುವದು! ಒಂದೇ ದಿವಸದಲ್ಲಿ ಮನೆಯ ಯಜಮಾನಳಾದಳು. ದೇವರೇ ನಮ್ಮ ಅಕ್ಕನು ಬಹು ಕಷ್ಟ ಅನುಭವಿಸಿರುವಳು. ಕಡೆತನಕ ಅವಳಿಗೆ ಇದೇ ಪ್ರಕಾರದ ಸುಖವಿರುವಂತೆ ಕರುಣಿಸು.

# [ ೨೨ ]

...

ರುದ್ರಪ್ಪನು ತನ್ನ ಸ್ವಂತ ಜಮೀನಿಯ ಲಾವಣಿಯನ್ನು ಒಯ್ಯುವದಕ್ಕೆ ಕುಕನೂರಿಗೆ ಬಂದಿದ್ದು, ಪಂತನ ಭೆಟ್ಟಿಗೆ ಬಂದನು. ನಂತರ ರುದ್ರಪ್ಪನು ಪಂತನನ್ನು ಕುರಿತು—ಯಾಕೆ ಪಂತರೇ, ಈಗ ಊರುಹಿಡಿದಂತೆತೋರುತ್ತದೆ?ಎಂದನು.

ಪಂತ—ರುದ್ರಪ್ಪ, ಈಗ ನನಗೆ ಪೂರ್ಣ ಪಶ್ಚಾತ್ತಾಪವಾಗಿದೆ. ಮೊದಲಿನ ಮಿತ್ರರ ಸಂಗತಿ ಬಿಟ್ಟು ನನ್ನ ಸುಶೀಲೆಯಾದ ಹೆಂಡತಿಯ ಸಹವಾಸದಲ್ಲಿ ಸುಖದಿಂದ ಕಾಲಕಳೆಯುಹತ್ತಿರುವೆನು, ಎಂದನು.

ಹೆಂಡತಿ ಎಂಬ ಹೆಸರು ಕೇಳಿದ ಕೂಡಲೆ ರುದ್ರಪ್ಪನಿಗೆ ಬಹಳ ಆಶ್ಚರ್ಯವಾಯಿತು. ಯಾಕಂದರೆ ಇವನ ಹೆಂಡತಿಯಾದ ಕಮಲೆಯು ನದಿಯಲ್ಲಿ ಮುಳುಗಿ ಸತ್ತ ಸಂಗತಿಯನ್ನು ತನ್ನ ಒಡೆಯನ ಮತ್ತು ಮೀನಾಕ್ಷಿಯ ಬಾಯಿಂದ ಕೇಳಿದ್ದನು. ಕಾರಣ ಅವನು ವಿಸ್ಮಯದಿಂದ—ಏನು ಪಂತರೇ, ಎರಡನೆಯ ಲಗ್ನವನ್ನು ಮಾಡಿಕೊಂಡಿರೇನು? ಎಂದು ಕೇಳಿದನು.

ಪಂತನ ಮನಸ್ಸಿಗೆ ಬಹಳ ಕೆಡಕೆನಿಸಿತು. ಆಗ ಅವನು ಸ್ವಲ್ಪ ಸಿಟ್ಟಿನಿಂದ—ನಾನು ಮೊದಲಿಗೆ ತಿಳಿಯದೆ ನನ್ನ ಹೆಂಡತಿಯನ್ನು ತಿರಸ್ಕರಿಸಿ ಅನ್ಯಾಯದಿಂದ ವರ್ತಿಸಿದೆನು. ಈಗ ನನಗೆ ಅವಳ ಯೋಗ್ಯತೆಯು ತಿಳಿಯಿತು; ಇಂಥವಳ ಗುಣ ತಿಳಿಯದೆ ಇದ್ದದ್ದು ನನ್ನ ದುರ್ದೈವವು. ಈಗ ಅವಳ ಆದರ-ಪ್ರೇಮಗಳಿಂದ ಸುಖದಿಂದ ಕಾಲಕಳೆಯುಹತ್ತಿರುವೆನು.

ರುದ್ರಪ್ಪನಿಗೆ ಬಹಳ ವಿಸ್ಮಯವಾಯಿತು. ಮನಸ್ಸಿನಲ್ಲಿ—ಇದೇನು? ನಮ್ಮ ದೇಸಾಯಿಯರೂ, ಮೀನಾಕ್ಷಿಯೂ ಕಮಲೆಯು ನದಿಯಲ್ಲಿ ಮುಳುಗಿ ಸತ್ತಳೆಂದು ಹೇಳಿದ್ದು ಸುಳ್ಳು ಇರಬಹುದೇನು? ಛೇ! ಅವರು ಎಂದಿಗೂ ಹಾಗೆ ಹೇಳಲಿಕ್ಕಿಲ್ಲ; ಅವಳು ನದಿಯಲ್ಲಿ ಬಿದ್ದು, ಮತ್ತೆ ಹೇಗಾದರೂ ಬದುಕಿರಲಿಕ್ಕೆಬೇಕು, ಎಂದು ನಿರ್ಧರಿಸಿಕೊಂಡು, ಮೋರೆಯಮೇಲೆ ಆನಂದದ ಕಳೆಯನ್ನು ತಂದುಕೊಂಡು—ಪಂತರೆ, ನಿಮ್ಮ ಮಾತು ಕೇಳಿ ನನಗೆ ಬಹಳೇ ಆನಂದವಾಯಿತು. ನೀವು ನೆಟ್ಟಗೆ ಇರಬೇಕೆಂಬದೇ ನನ್ನ ಇಚ್ಛೆಯು. ಒಳ್ಳೇದು, ಹೋಗಿ ಬರುತ್ತೇನೆ; ಎಂದು ಎದ್ದು ನಿಂತನು.

ಪಂತ—ಇಂದು ಊಟಕ್ಕೆ ಇಲ್ಲಿಗೇ ಬರಬೇಕು.

ರುದ್ರಪ್ಪನು ಮನಸ್ಸಿನಲ್ಲಿ—ಕಮಲೆಯನ್ನು ಪ್ರತ್ಯಕ್ಷವಾಗಿನೋಡಿ ಖಾತ್ರಿ ಮಾಡಿಕೊಳ್ಳಲಿಕ್ಕೆ ಇದೇ ಯೋಗ್ಯ ಸಮಯವೆಂದು ಭಾವಿಸಿ, ಪ್ರಕಾಶವಾಗಿ— ನಿಮ್ಮಂಥ ಬ್ರಾಹ್ಮಣರ ಪ್ರಸಾದವು ಸಿಗಬೇಕಾದರೆ ಪುಣ್ಯಬೇಕು. ಅಂದಬಳಿಕ ತಿರಸ್ಕರಿಸುವದು ಹೇಗೆ? ನಿಮ್ಮ ಇಚ್ಛೆಯಂತೆ ಆಗಲಿ, ಎಂದನು.

ರುದ್ರಪ್ಪನು ಅಂದು ಮಧ್ಯಾಹ್ನದಲ್ಲಿ ಪಂತರ ಮನೆಗೆ ಊಟಕ್ಕೆ ಹೋಗಿ ಕಮಲೆಯನ್ನು ಪ್ರತ್ಯಕ್ಷ ನೋಡಿ ಮನಸ್ಸಿಗೆ ಖಾತ್ರಿಮಾಡಿಕೊಂಡನು; ಮತ್ತು ಏನಾದರೂ ಯುಕ್ತಿಯಿಂದ ಈ ಹೊಸ ಸುದ್ದಿಯಿಂದ ನಾಲ್ಕು ದುಡ್ಡು ಗಳಿಸ ಬೇಕೆಂದು ವಿಚಾರಮಾಡಿದನು.

ಈ ಜಗತ್ತಿನಲ್ಲಿ ಎಷ್ಟೋ ಜನರು ಕಾರಣವಿಲ್ಲದೆ ಪರರ ಕೆಡಕುಬಯಸುವಂಥವರು ಉಂಟು. ಅದರಲ್ಲಿ ಅವರಿಗೆ ಸ್ವಾರ್ಥಕ್ಕೆ ಸ್ವಲ್ಪ ಆಸ್ಪದವಿದ್ದರಂತೂ ತೀರೇ ಹೋಯಿತು. ಅವರು ಎರಡನೆಯವರ ಮನೆಯನ್ನು ಹಾಳುಮಾಡಿ ಬಿಡುವರು. ರುದ್ರಪ್ಪನೂ ಅದೇ ಕೋಟಿಯೊಳಗಿನವನು. ಅವನು ಹೊಸರಾಮಪುರಕ್ಕೆ ಬಂದ ಕೂಡಲೆ ಪಂತನಿಗೆ ಒಂದು ಪತ್ರ ಒರೆದನು. ಪತ್ರದಲ್ಲಿ ಕಮಲೆಯು ಒಂದು ರಾತ್ರಿ ಗೋವಿಂದರಾಪುರ ಭೈರವಪುರದ ತೋಟದಲ್ಲಿ ಇದ್ದದ್ದೂ ಮತ್ತು ನದಿಯಲ್ಲಿ ಹಾರಿ ಕೊಂಡದ್ದೂ ಎಲ್ಲವೂ ಇತ್ತು; ಆದರೆ ಅವಳನ್ನು ಸ್ಮಶಾನಭೂಮಿಯಿಂದ ಅಪಹರಿಸಿದ್ದು, ಅದರಲ್ಲಿ ತನ್ನ ಅಂಗವಿದ್ದದ್ದು ಮಾತ್ರ ಬರೆದಿದ್ದಿಲ್ಲ. ಈ ಪತ್ರದಿಂದ ನೀಚನಾದ ರುದ್ರಪ್ಪನ ಮನೋಬಯಕೆಯು ಕೈಗೂಡಿತು. ಪಂತನಿಗೆ ಮೊದಲೇ ಸ್ವತಂತ್ರ ಬುದ್ಧಿಯು ಇದ್ದಿಲ್ಲ; ಮತ್ತು ರುದ್ರಪ್ಪನನ್ನು ಹಿತಚಿಂತಕ ಮಿತ್ರನೆಂದು ಭಾವಿಸಿದ್ದನು. ಆದ್ದರಿಂದ ಪತ್ರ ಓದಿದಕೂಡಲೆ ಸಿಟ್ಟಿನಿಂದ ಹುಚ್ಚನಾದನು. ಪಂತನು ಪತ್ರವನ್ನು ಮೂರು-ನಾಲ್ಕುಸಾರೆ ಓದಿದನು. ರುದ್ರಪ್ಪನ ಪತ್ರಬರಹದ ಶೈಲಿ, ಬಹು ದಿವಸದಮೇಲೆ ಕರೆಕಳುಹಿಸದೆ ಕಮಲೆಯು ಬಂದದ್ದು, ಅವಳ ಮೈಮೇಲಿನ ಆಭರಣಗಳು ಮೊದಲಾದ ಸಂಗತಿಗಳಿಂದ ಅವನ ಮನಸ್ಸಿನಲ್ಲಿ ಅನೇಕ ತರದ ಕುಕಲ್ಪನೆಗಳು ಹುಟ್ಟಹತ್ತಿದವು. ದೇವತಾಸ್ವರೂಪನಾದಂಥ ಶ್ರೀರಾಮಚಂದ್ರನೇ ಪರನಿಂದೆಯನ್ನು ಕೇಳಿ, ಶುದ್ಧಸ್ವರೂಪಳಾದ ಸೀತಾದೇವಿಯನ್ನು ತ್ಯಾಗಮಾಡಿದನು. ಅಂದಬಳಿಕ ವಿಚಾರಗೇಡಿಯಾದ ಪಂತನ ಪಾಡೇನು? ಕಡೆಗೆ ಅವನು ಮನಸ್ಸಿನ ತಾಪದಿಂದ ಮನೆಬಿಟ್ಟು ಹೊರಟನು. ೫-೬ ತಾಸು ರಾತ್ರಿ ಆದರೂ ಮನೆಗೆ ಬರಲಿಲ್ಲ.

ರಾತ್ರಿಯು ಬಹಳವಾದರೂ ಪಂತನು ಮನೆಗೆ ಬರಲಿಲ್ಲ. ಆಗ ಅವರ ಅಕ್ಕನು ಕಮಲೆಯನ್ನು ಕುರಿತು—ತಂಗೀ ಕಮಲಾ, ರಾತ್ರಿ ಹತ್ತುಹೊಡೆದು

ಹೋಗಿರಬಹುದು. ಇನ್ನೂ ಮನೋಹರನು ಮನೆಗೆ ಏಕೆ ಬರಲಿಲ್ಲ? ನಿನಗೇನಾದರೂ ಹೇಳಿ ಹೋಗಿರುವನೇನು? ಎಂದು ಕೇಳಿದಳು.

ಕಮಲೆ—ಇಲ್ಲ; ನನಗೇನೂ ಹೇಳಿ ಹೋಗಿಲ್ಲ.

ಆ ಮುದುಕೆಯು ಹೋಗಿ ಮಲಗಿಕೊಂಡಳು. ಕಮಲೆಯು ಮಲಗುವ ಕೋಣೆಗೆ ಹೋಗಿ—ಈಗ ಬರಬಹುದು; ಇನ್ನೊಂದು ಕ್ಷಣಕ್ಕೆ ಬರಬಹುದು, ಎಂದು ಗಂಡನ ಮಾರ್ಗ ನಿರೀಕ್ಷಣೆ ಮಾಡುತ್ತ ಕುಳಿತಳು. ಮುಂದೆ ಕೆಲಹೊತ್ತಿನಮೇಲೆ ಬಾಗಿಲ ಬಡಿಯುವ ಸಪ್ಪಳವಾಯಿತು. ಕಮಲೆಯು ಎದ್ದುಹೋಗಿ ಬಾಗಿಲ ತೆರೆದಳು. ಪಂತನು ಸುಮ್ಮನೆ ಕೋಣೆಯೊಳಗೆ ಬಂದು ಅಲ್ಲಿ ಇದ್ದ ಒಂದು ಮೇಜಿನಮೇಲೆ ಕುಳಿತನು. ಪಂತನು ಒಮ್ಮೆ ಸಿಟ್ಟಿನಿಂದ ಕಮಲೆಯ ಮುಖದ ಕಡೆಗೆ ನೋಡಿ ಏನೋ ವಿಚಾರಮಾಡಹತ್ತಿದನು.

ಕಮಲೆಯು ಬೀಸಣಿಕೆ ತಕ್ಕೊಂಡು ಗಾಳಿ ಹಾಕಹತ್ತಿದಳು. ಪಂತನು ಕೈ ಸಂಜ್ಞೆಯಿಂದ ಬೇಡೆಂದು ಹೇಳಿ, ಕರ್ಕಶ ಸ್ವರದಿಂದ—ಕಮಲೇ, ಎಂದನು.

ಅವನ ಕರೆಯೋಣದರಲ್ಲಿ ಪ್ರೇಮ-ಸ್ನೇಹ-ಆದರಗಳಾವವೂ ಇದ್ದಿಲ್ಲ; ಅತಿ ಕಠೋರವಾದ ಪ್ರಾಣಹೀನ ಸಂಬೋಧನವುಮಾತ್ರ ಕಂಡುಬರುತ್ತಿತ್ತು. ಅದನ್ನು ಕೇಳಿ ಕಮಲೆಯ ಮನಸ್ಸಿನಲ್ಲಿ ಹೇಗೋ ಆಯಿತು. ಆಗ ಅವಳು—ಇಂದು ನೀವು ಹೀಗೇಕೆ ಮಾಡುವಿರಿ? ಏನಾದರೂ ಜಡ್ಡು ಆಗಿದೆಯೇನು? ತಲೆ ನೋಯುತ್ತದೇನು? ಎಂದು ಕೇಳಿದಳು.

ಪಂತನು ವಿಕಟಹಾಸ್ಯದಿಂದ—ನಿಜವಾಗಿಯೂ ನನಗೆ ಜಡ್ಡುಆಗಿರುತ್ತದೆ; ಆದರೆ ಈಗಾದ ಅಜಾರಿಗೆ ಚಿಕಿತ್ಸೆಯಿಲ್ಲ; ಔಷಧವಿಲ್ಲ; ಶಾಂತಿಯಿಲ್ಲ; ಮತ್ತು ಔಷಧ ಕೊಡಲಿಕ್ಕೆ ಯೋಗ್ಯ ಜನರು ಭೂಮಿಯಲ್ಲಿ ಹುಟ್ಟೇ ಇಲ್ಲ.

ಕಮಲೆಗೆ ಗಂಡನ ಮಾತಿನ ಅರ್ಥವೇ ತಿಳಿಯಲಿಲ್ಲ. ಮನಸ್ಸಿನಲ್ಲಿ ಸ್ವಲ್ಪ ಭಯ ಹುಟ್ಟಿತು. ಆಗ ಅವಳು—ನೀವು ಏನೆನ್ನುವಿರೋ ನನಗೆ ತಿಳಿಯಲೊಲ್ಲದು, ಎಂದಳು.

ಪಂತ—ತಿಳಿಯುವದು, ಈಗ ತಿಳಿಯುವದು; ಈ ಪತ್ರವನ್ನು ಪೂರಾ ಓದು, ಅಂದರೆ ತಾನೇ ತಿಳಿಯುವದು.

ಪತ್ರವನ್ನು ಓದಿದ ಕೂಡಲೆ ಕಮಲೆಯ ಮುಖದ ಮೇಲೆ ಪ್ರೇತಕಳೆಯು ಬಂತು. ಭವಿಷ್ಯತ್ತಿನ ಅಮಂಗಲ ವಿಚಾರಗಳು ಒಂದರಹಿಂದೊಂದು ತಾಕಲಾಡಹತ್ತಿದವು. ಆಗ ಅವಳು ನಡುಗುವ ಧ್ವನಿಯಿಂದ ಗಂಡನನ್ನು ಕುರಿತು—

ರುದ್ರಪ್ಪನು ನಮ್ಮ ಚಿರಶತ್ರುವು. ಅವನ ಸಲುವಾಗಿಯೇ ನಮಗೆ ಈತರದ ದುರ್ದೆಶೆಯು ಪ್ರಾಪ್ತವಾಯಿತು. ಅವನು ಬಹಳ ನೀಚನು. ನನ್ನ ಮಾತು ಕೇಳುವ ಪೂರ್ವದಲ್ಲಿಯೇ ನೀವು ಅವನ ಮಾತಿನಮೇಲೆ ಯಾಕೆ ವಿಶ್ವಾಸವಿಡಬೇಕು? ಎಂದು ನುಡಿದು, ಸ್ಮಶಾನದಲ್ಲಿ ಒದಗಿದ ಸಂಗತಿ ಮೊದಲುಮಾಡಿ ಎಲ್ಲವನ್ನೂ ಹೇಳಿದಳು.

ಪಂತನು ಎಲ್ಲವನ್ನೂ ಕೇಳಿದನು; ಆದರೆ ಅವಳ ಮಾತಿನಮೇಲೆ ವಿಶ್ವಾಸ ವನ್ನಿಡಲಿಲ್ಲ. ಆಗ ಅವನು ಹುಬ್ಬುಗಂಟಿಕ್ಕಿ ತಿರಸ್ಕಾರದಿಂದ—ನೀನು ಒಂದು ರಾತ್ರಿ ಅಲ್ಲಿ ಇದ್ದಮೇಲೆ ಕಲಂಕಿತಳಾದಂತೆ ಆಯಿತು. ಆದ್ದರಿಂದ ನಾನು ಇಂದಿ ನಿಂದ ನಿನ್ನನ್ನು ತ್ಯಾಗಮಾಡಿದ್ದೇನೆ. ನಿನ್ನಂಥ ಕಲಂಕಿನಿಯನ್ನು ಮನೆಯಲ್ಲಿಟ್ಟು ಕೊಂಡು, ನನ್ನ ಮನೆತನದ ಗೌರವವನ್ನು ಕಡಿಮೆಮಾಡಿಕೊಳ್ಳಲು ನಾನು ಇಚ್ಛಿ ಸುವದಿಲ್ಲ. ಇಂದಿನಿಂದ ಈ ಮನೆಯಲ್ಲಿ ನಿನಗೆ ಆಶ್ರಯವು ಸಿಗುವದಿಲ್ಲ. ನೀನು ಪಾಪಿಷ್ಠಳು; ನಿನ್ನ ಸ್ಪರ್ಶಮಾಡಿದರೆ, ಪಾಪ ಬರುವದು.

ಗಂಡನ ಮಾತು ಕೇಳಿ ಕಮಲೆಗೆ ಸಿಡಿಲು ಬಡಿದಂತಾಯಿತು. ಅವಳಿಗೆ ದುಃಖವು ಒತ್ತರಿಸಿತು. ಅದನ್ನು ತಡೆಯಲಿಕ್ಕಾಗಲಿಲ್ಲ. ಅಳಲಿಕ್ಕೆ ಹತ್ತಿದಳು. ಅವಳು ಗಂಡನ ಕಾಲು ಹಿಡಿದುಕೊಂಡು—ನೀವು ನನ್ನ ಇಷ್ಟದೇವತೆ. ನೀವೇ ಹೀಗೆ ನಿರಪರಾಧಿನಿಯಾದ ನನ್ನಮೇಲೆ ಕಲಂಕ ಹೊರಿಸಿದರೆ, ನನ್ನ ಗತಿಯೇನು? ವಿಚಾರಮಾಡಿರಿ; ನಾನು ಪೂರ್ಣ ನಿರಪರಾಧಿನಿ ಇರುವೆನು. ನನ್ನನ್ನು ನಿಮ್ಮ ಚರಣದಿಂದ ಹೊರದೂಡಬೇಡಿರಿ; ಆಶ್ರಯಕೊಡಿರಿ, ಎಂದು ದೀನಭಾವದಿಂದ ಬೇಡಿಕೊಳ್ಳಹತ್ತಿದಳು.

ಪಂತನು ಮೋರೆ ಸೊಟ್ಟಮಾಡಿ—ಈಗ ನಾನು ನಿನ್ನ ಯಾವ ಮಾತೂ ಕೇಳುವದಿಲ್ಲ. ನಾನು ಇಂದಿನಿಂದ ಏಳು ದಿವಸಕ್ಕೆ ಈ ಮನೆಗೆತಿರುಗಿ ಬರುತ್ತೇನೆ. ಅಷ್ಟರೊಳಗೆ ನೀನು ಈ ಮನೆಯನ್ನು ಬಿಟ್ಟಹೋಗಿರಲಿಕ್ಕೆಬೇಕು. ಒಂದುವೇಳೆ ಇದಕ್ಕೆ ತಪ್ಪಿದರೆ, ನಿನ್ನನ್ನು ಅಪಮಾನಮಾಡಿ ಹೊರಗೆ ಹಾಕುವೆನು, ಎಂದು ಹೇಳಿ, ಹೆಂಡತಿಯು ಕಾಲು ಹಿಡಿದುಕೊಂಡಿದ್ದರೂ, ಒದೆದು ಹೊರಟುಹೋದನು.

ಅಹಾ! ಕಮಲೆಯು ಆಗಿನ ಸ್ಥಿತಿಯನ್ನೇನು ವರ್ಣಿಸುವದದೆ? ಅವಳಿಗೆ ಒಮ್ಮೆಲೆ ಸಾವಿರಾರು ಚೇಳು ಕಡಿದಂತೆ ಆಯಿತು. ಬಿರುಗಾಳಿಯಿಂದ ಬಳ್ಳಿಯು ಗಿಡದಿಂದ ನೆಲಕ್ಕೆ ಬೀಳುವಂತೆ ಕಮಲೆಯು ನೆಲಕ್ಕೆ ಬಿದ್ದುಬಿಟ್ಟಳು.

# [ ೨೩ ]

...

ಒಂದು ದಿವಸ ಗೋವಿಂದರಾಯನು ಸಂಜೆಯ ಮುಂದೆ ಪಡಸಾಲೆಯಲ್ಲಿ ಖುರ್ಚಿಯ ಮೇಲೆ ಕುಳಿತು ಮನಸ್ಸಿನಲ್ಲಿ ಏನೋ ಭಾವಿಸುತ್ತಿದ್ದನು; ಈ ವೇಳೆಯಲ್ಲಿ ರುದ್ರಪ್ಪನು, ಅಲ್ಲಿಗೆ ಬಂದು—ಹುಜೂರ! ಎಂದನು.

ಗೋವಿಂದರಾಯನು ಕಣ್ಣು ತೆರೆದು ರುದ್ರಪ್ಪನನ್ನು ನೋಡಿ—ಏನು ರುದ್ರಪ್ಪ, ಊರಿಂದ ಬೇಗ ತಿರುಗಿ ಬಂದಿ?

ರುದ್ರಪ್ಪ—ಒಂದು ಮಹತ್ವದ ಸುದ್ದಿಯನ್ನು ತೆಗೆದುಕೊಂಡು ಬಂದಿರುವೆನು. ಕೋಣೆಯೊಳಗೆ ನಡೆಯಿರಿ, ಹೇಳುತ್ತೇನೆ.

ಕಮಲೆಯ ವಿಷಯದ ಸುದ್ದಿಯನ್ನು ಕೇಳಿ ಗೋವಿಂದರಾಯನಿಗೆ ಆಶ್ಚರ್ಯವಾಯಿತು. ಆತನು—ರುದ್ರಪ್ಪ, ಈಗ ನೀನು ಹೋಗು. ನಾನು ಕೆಲ ಹೊತ್ತು ಈ ಬಗ್ಗೆ ಏಕಾಂತದಲ್ಲಿ ಆಲೋಚನೆ ಮಾಡುವೆನು.

ರುದ್ರಪ್ಪನು ಅಪ್ಪಣೆಯೆಂದು ಹೊರಟು ಹೋದನು. ಇತ್ತ ಗೋವಿಂದರಾಯನು ಮನಸ್ಸಿನ ಶಾಂತಿಗೋಸ್ಕರ ಮತ್ತೆ ಒಂದು ಗ್ಲಾಸು ಬ್ರಾಂಡಿ ಕುಡಿದು, ಕಮಲೆಯ ಸುಂದರ ರೂಪದ ಬಗ್ಗೆ, ಕಣ್ಣು ಮುಚ್ಚಿ ಆಲೋಚನೆ ಮಾಡಹತ್ತಿದನು. ಸುಂದರಿಯಾದ ಕಮಲೆಯು, ಅವನ ಮುಂದೆ ಮುಗುಳು ನಗೆಯಿಂದ ನಗುತ್ತ ನಿಂತಂತೆ ಭಾಸವಾಗಹತ್ತಿತು. ಅವನು ಅವಳ ಸುಂದರ ರೂಪವನ್ನು ನೋಡಿ ಮೈಮರೆತನು. ಇದೇವೇಳೆಯಲ್ಲಿ ಸೈತಾನನು ಅವನ ಕಿವಿಯಲ್ಲಿ—ನಿನಗೆ ಅಂಜಿಕೆಯಾತರದು? ಒಂದೇ ಸಾರೆ ಪ್ರಯತ್ನ ಮಾಡಿದರೆ ಇಂಥ ರತ್ನವುಹೇಗೆ ಕೈವಶವಾದೀತು? ಅನೇಕ ಸಾರೆ ಪ್ರಯತ್ನ ಮಾಡಬೇಕು. ಕಷ್ಟವನ್ನು ಅನುಭವಿಸಬೇಕು. ರುದ್ರಪ್ಪನಂಥ ಸಾಹಸಿಯು ನಿನಗಿರಲಿಕ್ಕೆ ವಿಚಾರವೇಕೆ ಮಾಡುವಿ? ಎಂದು ಹೇಳಿದನು. ಕಡೆಗೆ ಗೋವಿಂದರಾಯನು ಆ ಸೈತಾನನ ಆಧೀನನಾದನು. ಮನಸ್ಸಿನ ಸಮಾಧಾನಕ್ಕೋಸ್ಕರ, ಕೂತ ಸ್ಥಳದಿಂದ ಅತ್ತಿಂದ ಇತ್ತ ಇತ್ತಿಂದ ಅತ್ತ ಅಡ್ಡಾಡಹತ್ತಿದನು. ಮತ್ತು ಅಸ್ಫುಟಸ್ವರದಿಂದ—ಪಾಪ-ಪುಣ್ಯ-ಧರ್ಮ-ಅಧರ್ಮಗಳೆಂಬವು ಬರೇ ಮಾತುಗಳು. ಈ ಜಗತ್ತಿನಲ್ಲಿ ಪಾಪಮಾಡದವರು ಯಾರು? ಈ ಸಂಸಾರದಲ್ಲಿ ಪಾಪ ಮಾಡಿದವರೇ ಸುಖದಿಂದ ಇರುವರು. ಈ ಜಗತ್ತಿನಲ್ಲಿ ಎಷ್ಟೋ ಬಡವರು ತಮ್ಮ ಇಚ್ಛೆಯನ್ನು ಪೂರ್ಣ ಮಾಡಿಕೊಳ್ಳುವರು. ನನ್ನಂಥ

ಶ್ರೀಮಂತನು, ಇಷ್ಟು ಸಣ್ಣ ಕೆಲಸ ಮಾಡಿಕೊಳ್ಳಲಿಕ್ಕೆ ಆಗದೆ, ಮನಸ್ಸಿನಲ್ಲಿ ಕುದಿಯುವದು ಬಹಳ ಲಾಂಛನವು. ಈ ಕೆಲಸಕ್ಕೆ ರುದ್ರಪ್ಪನಂಥ ವಿಶ್ವಾಸಿಕನು ಸಹಾಯಕನಿರುವನು, ಎಂದು ಎರಡೂ ಕೈಗಳ ಮುಷ್ಟಿಯನ್ನು ಮಾಡಿ—ಈ ಕೆಲಸಕ್ಕೆ ಬೇಕಾದಷ್ಟು ಶ್ರಮ ಹತ್ತಲಿ. ಹಣ ಖರ್ಚು ಆಗಲಿ; ನನ್ನ ಇಚ್ಛೆಯನ್ನು ಪೂರ್ಣ ಮಾಡಿಕೊಂಡೇ ತೀರುವೆನು, ಎಂದು ನಿರ್ಧರಿಸಿದನು. ಇದೇ ಪ್ರಕಾರ ಹಲವು ಬಗೆಯ ವಿಚಾರಗಳಲ್ಲಿ ಅಂದಿನ ರಾತ್ರಿಯನ್ನು ಕಳೆದನು.

ಮರುದಿವಸ ಮುಂಜಾನೆ ಗೋವಿಂದರಾಯನು ಒಂದು ವರ್ತಮಾನಪತ್ರವನ್ನು ಓದುತ್ತ ಕುಳಿತಿದ್ದನು. ಅಷ್ಟರಲ್ಲಿ ರುದ್ರಪ್ಪನು ಅಲ್ಲಿಗೆ ಬಂದನು. ಅವನನ್ನು ನೋಡಿ ಕೈಯೊಳಗಿನ ವರ್ತಮಾನಪತ್ರವನ್ನು ಬದಿಗಿಟ್ಟು—ನಿನ್ನೆ ರಾತ್ರಿಯಿಂದ ವಿಚಾರ ಮಾಡಹತ್ತಿರುವೆನು; ಏನಾದರೂ ಮಾಡಿ ಕಮಲೆಯನ್ನು ದೊರಕಿಸಲಿಕ್ಕೇ ಬೇಕು, ಎಂದು ನಿರ್ಧರಿಸಿರುವೆನು. ನೀನು ಈ ಕೆಲಸದಲ್ಲಿ ನನಗೆ ಸಹಾಯ ಮಾಡಲಿಕ್ಕೇ ಬೇಕು, ಎಂದನು. ಬಹಳ ಹೊತ್ತಿನ ವರೆಗೆ ಅವರಿಬ್ಬರ ನಡುವೆ ಎಷ್ಟೋ ಮಾತುಗಳಾದವು. ಬಳಿಕ ರುದ್ರಪ್ಪನು ಕಮಲೆಯನ್ನು ೧೫ ದಿವಸಗಳಲ್ಲಿ ತಂದೊಪ್ಪಿಸುತ್ತೇನೆಂದು ಹೇಳಿ, ಖರ್ಚಿಗೆ ಹಣವನ್ನು ಇಸಕೊಂಡು, ಅಲ್ಲಿಂದ ಹೊರಹೊರಟನು.

ಕಮಲೆಯು ಚಿಕ್ಕಂದಿನಿಂದಲೂ ಕಷ್ಟವನ್ನು ಅನುಭವಿಸಿದವಳಾದ್ದರಿಂದ ಅವಳಲ್ಲಿ ಸಹನಶಕ್ತಿಯು ಬಹಳವಿತ್ತು. ಅವಳು ಮೇಲೆ ಹೇಳಿದ ಪ್ರಕಾರ ಗಂಡನಿಂದ ಅಪಮಾನ ಹೊಂದಿದರೂ ಆ ದುಃಖವನ್ನು ನುಂಗಿಕೊಂಡು, ಮುಂದೆ ಏನು ಮಾಡಬೇಕೆಂಬ ಬಗ್ಗೆ ವಿಚಾರ ಮಾಡಹತ್ತಿದಳು. ಗಂಡನಂತೂ ನೀನು ಮನೆಯಲ್ಲಿ ಇರುವವರಗೆ ನಾನು ಮನೆಗೆ ಬರುವದಿಲ್ಲವೆಂದು ಹೇಳಿ ಹೋಗಿದ್ದನು. ಅದರಿಂದ ಅವಳು ಮನಸ್ಸಿನಲ್ಲಿಯೆ—ಇನ್ನು ಇಲ್ಲಿ ಇದ್ದು ಉಪಯೋಗವೇನು? ನಾನು ಇಲ್ಲಿ ಇದ್ದು ಅವರಿಗೇಕೆ ಕಷ್ಟಕೊಡಬೇಕು? ನಾನು ಇರುವದರಿಂದ ಅವರು ಮನೆ ಬಿಟ್ಟು ಅನಾಥರಂತೆ ತಿರುಗಬೇಕಾಗುವದು. ನಾನೇ ಇಲ್ಲಿಂದ ಹೋದರೆ ಅವರಿಗೆ ಯಾವ ತೊಂದರೆಯೂ ಇಲ್ಲದಂತೆ ಆಗುವದು. ಅವರ ಸುಖವೇ ನನ್ನ ಸುಖವು. ನನ್ನ ದುಃಖದ ಭಾಗವು ಅವರಿಗೇಕೆ? ಎಂದು ನಿರ್ಧರಿಸಿ, ಬಸವಂತನಿಗೆ ಒಂದು ಪತ್ರ ಬರೆದಳು. ಅದರಲ್ಲಿ—''ನನಗೆ ಅಚಾರಿಯಾಗಿದೆ. ಅವರು ಯಾವದಾದರೊಂದು ಕೆಲಸ ಹುಡುಕುವದರ ಸಲುವಾಗಿ ಧಾರವಾಡಕ್ಕೆ ಹೋಗಿರುವರು. ಕಾರಣ ನೀನು ಬಂದು ಕರಕೊಂಡು ಹೋಗಬೇಕು.'' ಈ ಪ್ರಕಾರ ಬರೆದಿತ್ತು.

ಬಸವಂತನು ಒಂದು ಗಾಡೀ ಮಾಡಿಕೊಂಡು, ಕುಕುನೂರಿಗೆ ಬಂದನು. ಅವನ ಮುಂದೆ ಕಮಲೆಯು ತನಗೆ ಜಡ್ಡಾಗಿದೆಯೆಂದೂ, ಔಷಧ ತಕ್ಕೊಳ್ಳಲಿಕ್ಕೆ ಹೇಳಿ, ಗಂಡನು ಧಾರವಾಡಕ್ಕೆ ಹೋಗಿರುವನೆಂದೂ ಹೇಳಿದಳು. ಆ ಮಾತು ಬಸವಂತನಿಗೆ ನಿಜವೆಂದು ತೋರಿತು. ಬಳಿಕ ಕಮಲೆಯು ಅತ್ತಿಗೆಗೂ ಈ ಸಂಗತಿ ಹೇಳಿ ನಮಸ್ಕಾರ ಮಾಡಿ ದುಃಖದಿಂದ ಬಂಡಿಯೊಳಗೆ ಕುಳಿತಳು. ಅವರು ಸುಮಾರು ೬-೭ ಮೈಲು, ಹೋಗಿರಬಹುದು. ಅಷ್ಟರಲ್ಲಿ ಸುತ್ತಲೂ ಮೋಡ ಕವಿದು ಕತ್ತಲೆಯಾಯಿತು. ಗಾಳಿಯೂ ಹೆಚ್ಚಾಯಿತು. ನಡುನಡುವೆ ಮಿಂಚಹತ್ತಿತು. ಕಡೆಗೆ ಹನಿಗಳು ಉದರಹತ್ತಿವು. ಎದುರಗಾಳಿಯಾದ್ದರಿಂದ, ಎತ್ತುಗಳು ನಡೆಯದ ಹಾಗಾದವು. ಆಗ ಬಂಡಿಯುವನು ಬಂಡಿಯನ್ನು ತರುಬಿದನು. ಬಸವಂತನು ಮುಂದೆ ಹೇಗೆ ಮಾಡಬೇಕೆಂದು ವಿಚಾರಿಸುತ್ತ ಬಂಡಿಯ ಕೆಳಗೆ ಇಳಿದನು. ಅಷ್ಟರಲ್ಲಿ ಯಾರೋ ಒಬ್ಬರು ಹಿಂದಿನಿಂದ ಬಂದು, ಬಸವಂತನ ತಲೆಗೆ ಹೊಡೆದರು. ಮತ್ತೆ ಇಬ್ಬರು ಬಂಡಿಯ ಮುಂದೆ ಬಂದು ಬಂಡಿ ಹೊಡೆಯುವವನನ್ನು ನೆಲಕ್ಕೆ ಕೆಡವಿ, ಎತ್ತು ಬಿಚ್ಚಿದರು. ಇದನ್ನೆಲ್ಲ ನೋಡಿ ಕಮಲೆಯು ಚಿಟ್ಟನೆ ಚೀರಿದಳು. ಆ ಯಮದೂತರಂಥ ನೀಚರು ಬಂಡಿಯೊಳಗೆ ಹತ್ತಿ, ಕಮಲೆಯ ಕಣ್ಣು ಕಟ್ಟಿ ಅವಳನ್ನು ಹೊತ್ತುಕೊಂಡರು. ಆಗ ಒಬ್ಬನು ಅಧಿಕಾರ ಸ್ವರದಿಂದ—"ಬಹಳ ಜೋಕೆಯಿಂದ ಅಲ್ಲಿಗೆ ನಡೆಯಿರಿ, ಎಂದನು. ಈ ಪ್ರಕಾರ ಅಪ್ಪಣೆ ಕೊಟ್ಟವನು ಬೇರೆ ಯಾರೂ ಅಲ್ಲ; ರುದ್ರಪ್ಪನು.

ಮುಂದೆ ೨-೩ ತಾಸಿನ ಮೇಲೆ ಬಸವಂತನಿಗೆ ಎಚ್ಚರ ಬಂತು. ಎದ್ದು ನೋಡಿದನು, ಬಂಡಿಯೂ ಇದ್ದಿಲ್ಲ, ಯಾರೂ ಇದ್ದಿಲ್ಲ. ರಾತ್ರಿಯೂ ಬಹಳವಾಗಿತ್ತು. ಬೆಳತನಕ ಅಲ್ಲಿಯೇ ಇದ್ದು, ಮುಂದೆ ಮುಂಜಾನೆ ಊರಿಗೆ ಬಂದು, ಎಲ್ಲ ಸಂಗತಿಯನ್ನೂ ಭುಜಂಗರಾಯರಿಗೆ ತಿಳಿಸಿದನು; ಇದನ್ನು ಕೇಳಿ ಭುಜಂಗರಾಯರಿಗೆ ಬಹಳ ಕೆಡಕೆನಿಸಿತು. ಅವರು ಇದು ಗೋವಿಂದರಾಯನ ಕೆಲಸವೇ ಆಗಿರಬಹುದೆಂದು ಊಹಿಸಿದರು; ಆದರೆ ಗೋವಿಂದರಾಯನು ಮಾತ್ರ ದೂರವಿದ್ದು, ರುದ್ರಪ್ಪನಿಂದ ಈ ಕೆಲಸ ಮಾಡಿಸಿರುವನೆಂದು ಅವರ ಕಲ್ಪನೆಯಾಯಿತು.

[೨೪]

ಇತ್ತ ಶಾರದೆಯು ಗುಪ್ತವಾಗಿ ಯಾವಾಗಲೂ ನೆರಳಿನಂತೆ ಗೋವಿಂದರಾಯನ ಮೇಲೆ ಪಾಳತಿ ಇಟ್ಟಳು. ಗೋವಿಂದರಾಯನು ಬಂಗ್ಲೆಯಲ್ಲಿ ಇರದೆ ಎಲ್ಲಿಯೋ ಹೋಗಿರುವನೆಂದು ತಿಳಿದಕೂಡಲೆ ಅವಳು ತೋಟಕ್ಕೆ ಬಂದಳು. ಬಂಗ್ಲೆಯಲ್ಲಿ ಭೀಮರಾಯನೆಂಬ ಕಾರಕೂನನೊಬ್ಬನೇ ಇರುತ್ತಿದ್ದನು. ಅವನು ಶಾರದೆಗೆ ಮೋಹಿತನಾಗಿದ್ದನು. ತನ್ನ ಯಜಮಾನನು ಇಲ್ಲದಾಗ ಶಾರದೆಯು ಬಂದದ್ದನ್ನು ನೋಡಿ, ತನ್ನ ಮನಸ್ಸಿನಲ್ಲಿಯ ಮಾತು ಕೇಳಲಿಕ್ಕೆ ಯೋಗ್ಯ ಸಮಯವೆಂದು ತಿಳಕೊಂಡು—ಏನು ಶಾರದಾಬಾಯಿಯವರೇ, ತಮ್ಮ ಆಗಮನವಾಯಿತು? ಎಂದನು.

ಶಾರದಾ—ಏನುಕಾರಕೂನಸಾಹೇಬರೇ, ನಿಮ್ಮಧನಿಯರು ಇರುವರೇನು?

ಆಗ ಭೀಮರಾಯನು ಶಾರದೆಯ ಪ್ರಸನ್ನತೆ ಪಡೆಯುವದಕ್ಕೆ—ದೇಸಾಯಿಯರು ಬಳವಂತರಾಯರ ಮಗಳನ್ನು ಅಪಹರಿಸುವದಕ್ಕೆ ನಾಗೇಂದ್ರಗಡಕ್ಕೆ ಹೋಗಿರುವರು. ರುದ್ರಪ್ಪನು ಇಷ್ಟರಲ್ಲಿ ಆಕೆಯನ್ನು ಅಪಹರಿಸಿಕೊಂಡು ತಂದಿರಬಹುದು. ನೀನು ಸುಮ್ಮನೆ ದೇಸಾಯಿಯರನ್ನೇಕೆ ಬಯಸುತ್ತೀ? ಎಂದನು.

ಈ ಸಂಗತಿಯನ್ನು ಕೇಳಿ ಶಾರದೆಗೆ ಬಹಳ ದುಃಖವಾಯಿತು. ಅವಳು ಕೂಡಲೆ ಹಿಂದಿರುಗಿ ಬಸವಂತನ ಮನೆಗೆ ಬಂದಳು.

ಬಸವಂತನ ತಲೆಗೆ ಪೆಟ್ಟು ಹತ್ತಿತ್ತು. ಅವನು ತಲೆಗೆ ಮಲಾಮುಪಟ್ಟಿಯನ್ನು ಹಾಕಿಕೊಂಡು ಹೊರಗೆ ಕುಳಿತಿದ್ದನು. ಶಾರದೆಯು ಹೋದಕೂಡಲೆ ಅವನು—ಇದೇನು, ನಸುಕಿನಲ್ಲಿ ಇತ್ತ ಬಂದಿರಿ?

ಶಾರದಾ—ಸ್ವಲ್ಪ ಕೆಲಸವದೆ; ಒಳಗೆ ನಡೆ, ಹೇಳುತ್ತೇನೆ.

ಇಬ್ಬರೂ ಒಂದು ಕೋಣೆಯಲ್ಲಿ ಹೋದರು. ಆ ಮೇಲೆ ಶಾರದೆಯು—ಬಸವಂತಾ, ಕಮಲೆಯು ಕ್ಷೇಮದಿಂದ ಇರುವಳೇ? ಎಂದು ಕೇಳಿದಳು.

ಆಗ ಬಸವಂತನು ಕಮಲೆಯನ್ನು ಕರೆಯಲಿಕ್ಕೆ ಹೋದದ್ದು, ದಾರಿಯಲ್ಲಿ ವರ್ತಿಸಿದ್ದು ಎಲ್ಲ ಸಂಗತಿಯನ್ನು ಹೇಳಿದನು.

ಅದನ್ನು ಪೂರಾ ಕೇಳಿದನಂತರ ಶಾರದೆಯು—ಬಸವಂತಾ, ಈ ಕೆಲಸವು ರುದ್ರಪ್ಪನಿಂದಲೇ ಆಗಿದೆ. ಅವಳನ್ನು ಒಯ್ದು ನಾಗೇಂದ್ರಗಡದಲ್ಲಿ ಇಟ್ಟಿರುವರು. ರುದ್ರಪ್ಪನಿಗೂ ದೇಸಾಯಿಯರಿಗೂ ನಡೆದ ಗುಪ್ತ ಪತ್ರಗಳೂ ನನ್ನ ಹತ್ತರ ಇರುವವು ನೋಡು, ಎಂದು ಯುಕ್ತಿಯಿಂದ ದೊರಕಿಸಿದ ಆ ಪತ್ರಗಳನ್ನು ತೋರಿಸಿದಳು.

ಬಸವಂತ—ಈ ಕಾಗದಗಳ ಸಹಾಯದಿಂದ ರುದ್ರಪ್ಪನ ಮೇಲೆ ಫಿರ್ಯಾದಿ ಮಾಡೋಣ.

ಶಾರದಾ—ಬೇಡ; ಅವನು ಬಹಳೇ ಠಕ್ಕನು. ಈ ವಿಷಯದಲ್ಲಿ ಬಹಳ ಧೂರ್ತನು. ಪತ್ರವನ್ನು ಅವನು ಸ್ವಹಸ್ತದಿಂದ ಬರೆಯುವವನಲ್ಲ.

ಬಸವಂತ—ಹಾಗಾದರೆ, ಮುಂದೆ ಹೇಗೆ ಮಾಡಬೇಕು?

ಶಾರದಾ—ನಾನೊಬ್ಬಳೇ ನಾಗೇಂದ್ರಗಡಕ್ಕೆ ಹೋಗಿ ನನ್ನ ಕೈಯಿಂದಾದಷ್ಟು ಸಾಹಸದಿಂದ ಕಮಲೆಯನ್ನು ಅವರ ಕೈಯಿಂದ ಉದ್ಧಾರಮಾಡುವೆನು. ಒಂದುವೇಳೆ ಅದು ಅಸಾಧ್ಯವೆಂದು ತೋರಿದರೆ ನಿನಗೆ ಬಂದು ಸುದ್ದೀ ಹೇಳುವೆನು.

ಬಸವಂತ—ನಾನೂ ನಿನ್ನ ಸಂಗಡ ಬರುವೆನು.

ಶಾರದಾ—ಬೇಡ; ನೀನು ಬಂದರೆ ಜನರಿಗೆ ಸಂಶಯಬರುವದು, ಎಂದು ಹೇಳಿ, ಅವನ ಅಪ್ಪಣೆ ಪಡಕೊಂಡು ಹೊರಟುಹೋದಳು.

## [ ೨೫ ]

ರಾತ್ರಿ ೮-೯ ತಾಸಿನ ಸುಮಾರಿಗೆ ಕಮಲೆಯನ್ನು ನಾಗೇಂದ್ರಗಡಕ್ಕೆ ತೆಗೆದುಕೊಂಡುಹೋದರು. ಅವಳಿಗೆ ಕ್ಲೋರೋಫಾರ್ಮಿನ ವಾಸನೆಯನ್ನು ತೋರಿಸಿದ್ದರಿಂದ, ಇನ್ನೂ ಅವಳಿಗೆ ಚೇತನ ಬಂದಿದ್ದಿಲ್ಲ. ಗೋವಿಂದರಾಯನು ರುದ್ರಪ್ಪನು ಕೆಲಸಮಾಡಿಕೊಂಡು ಬಂದದ್ದನ್ನು ನೋಡಿ, ಆನಂದದಿಂದ ಆಗಿಂದಾಗಲೇ ಅವನಿಗೆ ೧೦೦ ರೂಪಾಯಿ ಇನಾಮು ಕೊಟ್ಟನು; ಮತ್ತು ಮೀನಾಕ್ಷಿಯನ್ನು ಕರೆಕಳುಹಿದನು. ತನ್ನ ಕೆಲಸದಲ್ಲಿ ಮೀನಾಕ್ಷಿಯು ಪಾಲುಗಾರ್ತಿಯಾಗುವದು ರುದ್ರಪ್ಪನ ಮನಸ್ಸಿನಲ್ಲಿ ಇದ್ದಿಲ್ಲ; ಆದರೆ ಮಾಡುವದೇನು? ಮರುದಿನ ಮಧ್ಯಾಹ್ನಕ್ಕೆ ಮೀನಾಕ್ಷಿಯು ಅಲ್ಲಿಗೆ ಬಂದಳು.

ಒಮ್ಮಿಂದೊಮ್ಮೆ ಒದಗಿದ ಈ ಅಪಘಾತದಿಂದ ಕಮಲೆಯ ಮನಸ್ಸಿನ ಮೇಲೆ ಪರಿಣಾಮವಾಗಿ ಅವಳಿಗೆ ನಿಜವಾಗಿ ಜ್ವರಬಹತ್ತಿದವು. ಮರುದಿವಸ ೭-೮ ತಾಸಿಗೆ ಅವಳಿಗೆ ಎಚ್ಚರವಾಯಿತು. ಅವಳು ಕಣ್ಣು ತೆರೆದು ನೋಡಿದಳು. ಎದುರಿಗೆ ಮೀನಾಕ್ಷಿಯು ಕುಳಿತಿದ್ದಳು. ಅವಳನ್ನು ನೋಡಿದಕೂಡಲೆ ಕಮಲೆಗೆ ನಡುಗು ಹುಟ್ಟಿತು; ಮುಖವು ಪೂರಾ ಬಾಡಿತು. ಆಗ ಮೀನಾಕ್ಷಿಯು—ಅಹಾ! ಮುಖವು ಬಾಡಿಹೋಗಿದೆ. ಮಗಳೇ, ಈಗ ಆರಾಮು ಅನಿಸುವದೇನು?

ಅವಳನ್ನು ಒದ್ದು ಕೋಣೆಯಿಂದ ಹೊರಗೆಹಾಕಬೇಕೆಂದು ಕಮಲೆಯ ಮನಸ್ಸಿನಲ್ಲಿ ಬಂದಿತು; ಆದರೆ ಮಾಡುವದೇನು? ಏಳಲಿಕ್ಕೆ ಶಕ್ತಿಯಿದ್ದಿಲ್ಲ. ತಾನು ಮತ್ತೆ ನೀಚ ಗೋವಿಂದರಾಯನ ಕೈಯಲ್ಲಿ ಸಿಕ್ಕಿರುವೆನೆಂದು ಅವಳಿಗೆ ಖಾತ್ರಿಯಾಯಿತು. ಆಗ ಅವಳು ವಿಲಕ್ಷಣ ಚಿಂತೆಗೆ ಒಳಗಾದಳು. ಕೆಲಹೊತ್ತಿನವರೆಗೆ ಕುಳಿತು ರಾತ್ರಿಯಾಗಲು, ಮೀನಾಕ್ಷಿಯು ಬೇರೆ ಕಡೆಗೆ ಹೋಗಿ ಮಲಗಿಕೊಂಡಳು.

ಕಮಲೆಯು ಈ ಪ್ರಕಾರ ಆಲೋಚನೆ ಮಾಡುತ್ತಿರುವಾಗ ಆ ಕತ್ತಲೆಯಲ್ಲಿ ಯಾರೋ ಒಬ್ಬರು ಅವಳನ್ನು ಮುಟ್ಟಿ ಮೆಲ್ಲಗೆ—ನೀನು ಮಲಗಿರುವಿ ಏನು? ಎಂದು ಕೇಳಿದರು.

ಕಮಲೆಯು ಗಾಬರಿಯಾಗಿ ಎದ್ದು ನೋಡಿದಳು. ತನ್ನ ಹಾಸಿಗೆಯ ಹತ್ತರ ಒಬ್ಬ ಸ್ತ್ರೀಯು ನಿಂತಿದ್ದಳು. ದೀಪವನ್ನು ಬಹಳ ಸಣ್ಣಮಾಡಿದ್ದರಿಂದ ಅವಳ ಮುಖವು ಚನ್ನಾಗಿ ಕಾಣುತ್ತಿದ್ದಿಲ್ಲ. ಅಗ ಅವಳು--ಯಾರವರು? ಮೀನಾಕ್ಷಿ, ಎಂದಳು.

ಆ ಸ್ತ್ರೀಯು--ಹಾ, ಮೆಲ್ಲಗೆ ಮಾತಾಡು. ನಾನು ಮೀನಾಕ್ಷಿಯಲ್ಲ; ಶಾರದೆ.

ಕಮಲೆಯು ಆಶ್ಚರ್ಯದಿಂದ—ನನ್ನ ಹತ್ತರ ನಿನ್ನ ಕೆಲಸವೇನು?

ಶಾರದೆ—ನಾನು ನಿನ್ನನ್ನು ಇಲ್ಲಿಂದ ಪಾರುಮಾಡಲಿಕ್ಕೆ ಬಂದಿರುವೆನು.

ಕಮಲೆಯು(ಆನಂದದಿಂದ)—ದೇವರು ನಿನಗೆ ಕಲ್ಯಾಣಮಾಡಲಿ; ಆದರೆ ನಿನ್ನ ಪರಿಚಯವನ್ನಿಷ್ಟು ಹೇಳುವೆಯಾ?

ಶಾರದೆ—ಬಸವಂತನು ನನ್ನನ್ನು ಇಲ್ಲಿಗೆ ಕಳಿಸಿರುವನು. ನಿನಗೆ ಇನ್ನು ಯಾವ ಅಂಜಿಕೆಯೂ ಇಲ್ಲ. ನನ್ನಮೇಲೆ ವಿಶ್ವಾಸವನ್ನಿಡು. ಈ ದೇಸಾಯಿಯು ಹಿಂದಕ್ಕೊಮ್ಮೆ ನಿನ್ನಂತೆ ಹಿಡತರಿಸಿ, ನನ್ನ ಪಾತಿವ್ರತ್ಯವನ್ನು ನಾಶಮಾಡಿರುವನು. ಈಗ ನನ್ನನ್ನು ತ್ಯಜಿಸಿರುವನು.

ಕಮಲೆಗೆ ತುಸ ಧೈರ್ಯ ಬಂತು. ಅವಳು ತನ್ನ ಉದ್ಧಾರಕ್ಕಾಗಿ ದೇವರು ದೇವದೂತಿಯನ್ನೇ ಕಳುಹಿಸಿರುವನೆಂದು ತಿಳಿದಳು. ಆಗ ಅವಳು—ಹಾಗಾದರೆ ನಡೆ; ನಾನು ಬರುತ್ತೇನೆ, ಎಂದಳು.

ಶಾರದೆ—ಅಮ್ಮಾ, ಈಗ ಬೇಡ; ಹೊರಗೋಡೆಯು ಬಹಳ ಎತ್ತರವದೆ. ಇದಲ್ಲದೆ ಹೊರಗೆ ಕಾವಲಗಾರರಿದ್ದಾರೆ. ನಾನು ಯೋಗ್ಯಸಮಯವನ್ನು ನೋಡಿ, ಪಾರುಮಾಡುವೆನು. ಯೋಗ್ಯಸಮಯಸಿಗದೆ ದೇಸಾಯಿಯರು ನಿನ್ನಮೇಲೆ ಅತ್ಯಾಚಾರಮಾಡುವದಿಲ್ಲ. ಒಂದುವೇಳೆ ಅತ್ಯಾಚಾರಮಾಡಲಿಕ್ಕೆ ಪ್ರಯತ್ನಿಸಿದರೆ, ನೀನು ಅದಕ್ಕೆ ಅವಕಾಶಕೊಡದಂತೆ ಹೇಗಾದರೂ ಒಂದೆರಡು ದಿವಸ ಕಳೆ. ನನ್ನಮೇಲೆ ಪೂರ್ಣ ವಿಶ್ವಾಸವನ್ನು ಇಡು, ಎಂದು ಹೇಳಿ ಹೊರಟುಹೋದಳು.

## [ ೨೬ ]

...

ಇತ್ತ ರುದ್ರಪ್ಪನು ಕುಕುನೂರಲ್ಲಿ ಹನುಮಂತಭಟ್ಟನೆಂಬ ಒಬ್ಬ ಬ್ರಾಹ್ಮಣನನ್ನು ಕರಕೊಂಡು ಹೋಗಿ, ಮನೋಹರಪಂತನು ಬರಕೊಟ್ಟ ಬಳವಂತರಾಯನ ಮನೆಯ ಖರೀದಿ ಪತ್ರವನ್ನು ನೋಂದಣೀ ಮಾಡಿಸಿಕೊಂಡು ರಾಮಪುರಕ್ಕೆ ಮನೆಯನ್ನು ತನ್ನ ವಶಕ್ಕೆ ತಕ್ಕೊಳ್ಳುವದಕ್ಕೆ ಬಂದನು. ಈ ಸುದ್ದಿಯು ಭುಜಂಗರಾಯರಿಗೆ ತಿಳಿಯಿತು. ಹನುಮಂತಭಟ್ಟನು ಭೋಳೇ ಬ್ರಾಹ್ಮಣನಿದ್ದು, ರುದ್ರಪ್ಪನು ೧೦೦ ರೂಪಾಯಿ ಕೊಡುತ್ತೇನೆಂದು ಹೇಳಿ, ತನಗೆ ಮೋಸಮಾಡಿ ೨೫ ರೂಪಾಯಿಮಾತ್ರ ಕೊಟ್ಟಿರುವನೆಂದು ಭುಜಂಗರಾಯರಮುಂದೆ ಹೇಳಿದನು. ಆಗ ಭುಜಂಗರಾಯರು ರುದ್ರಪ್ಪನನ್ನು ಹಿಡತರಿಸಿ, ಅವನನ್ನು ಪೋಲೀಸರ ವಶಕ್ಕೆ ಕೊಟ್ಟರು. ರುದ್ರಪ್ಪನು ಪೋಲೀಸರ ದರ್ಪಿಗೆ ಅಂಜಿ, ಗೋವಿಂದರಾಯನ ಅಪ್ಪಣೆಯ ಮೇರೆಗೆ ತಾನು ಕಮಲೆಯ ವಿಷಯವಾಗಿ ಮಾಡಿದ ಕಾರಸ್ಥಾನಗಳನ್ನೆಲ್ಲ ಹೇಳಿದನು. ಆದ್ದರಿಂದ ಪೋಲೀಸರು ಅವನನ್ನು ಠಾಣೇಕ್ಕೆ ತೆಗೆದುಕೊಂಡು ಹೋದರು.

ಹೀಗೆ ರಾಮಪುರದಲ್ಲಿ ರುದ್ರಪ್ಪನು ಪೇಚಿಗೆ ಬಿದ್ದಿರಲು, ಅತ್ತ ನಾಗೇಂದ್ರಗೆಡದಲ್ಲಿ ಗೋವಿಂದರಾಯನು ರುದ್ರಪ್ಪನು ಯಾಕೆ ಬರಲಿಲ್ಲೆಂದು ಒಂದೇಸವನೆ ಚಡಪಡಿಸುತ್ತಿದ್ದನು. ಅಷ್ಟರಲ್ಲಿ ಭೀಮರಾಯನಿಂದ ಒಂದು ಪತ್ರವು ಬಂದಿತು. ಅದರಲ್ಲಿ ಇಲ್ಲಿ ಬಹಳ ಗೊಂದಲವುಂಟಾದ್ದರಿಂದ ನನಗೆ ಬರಲಿಕ್ಕಾಗಲಿಲ್ಲ, ಎಂದು ಬರೆದಿತ್ತು. ಅದರಿಂದ ಗೋವಿಂದರಾಯನ ಚಿಂತೆಯು ಮತ್ತಿಷ್ಟು ಹೆಚ್ಚಾಯಿತು. ಅವನು ಎಷ್ಟು ಬ್ರಾಂಡಿಯನ್ನು ಕುಡಿದರೂ ಸಮಾಧಾನವಾಗದಾಯಿತು. ಆಗ ಅವನು--ಏನೇ ಆಗಲಿ, ಒಮ್ಮೆ ಕಮಲೆಯ ಉಪಭೋಗ ತಕ್ಕೊಂಡೇ ತೀರಬೇಕೆಂದು ನಿರ್ಧರಿಸಿ, ಆಕೆಯ ಕೋಣೆಗೆ ಹೋದನು. ಸರಿರಾತ್ರಿಯು; ಕಮಲೆಗೆ ಗಡದ್ದು ನಿದ್ದೆ ಹತ್ತಿತ್ತು; ಅವನು ಆಕೆಯ ಸುಂದರರೂಪವನ್ನು ನೋಡಿ ಎಲ್ಲ ಚಿಂತೆಯನ್ನೂ ಮರೆತು, ಒಮ್ಮೆ ಗಹಗಹಿಸಿ ನಕ್ಕನು. ಕಮಲೆಯು ಗಾಬರಿಯಾಗಿ ಎಚ್ಚತ್ತಳು. ಎದುರಿಗೆ ಗೋವಿಂದರಾಯನು ನಿಂತದ್ದರಿಂದ, ಆಕೆಯ ಮುಖವು ಕಪ್ಪಿಟ್ಟಿತು. ಗೋವಿಂದರಾಯನು ಅವಳ ಮುಖವನ್ನು ಚುಂಬಿಸ ಹೋದನು. ಆಗ ಆಕೆಯು ಅವನ ಕೆನ್ನೆಯಮೇಲೆ ಹೊಡೆದಳು. ಅಷ್ಟರಲ್ಲಿ ಹಾ! ತಡೆ; ಬಂದೆ, ಎಂದು ಯಾರೋ ಒದರಿದರು. ಗೋವಿಂದರಾಯನು ಸರಿದುನಿಂತನು.

ಹೀಗೆ ಒದರಿದವಳು ಶಾರದೆಯಾಗಿದ್ದಳು. ಆಕೆಯು ಕೋಣೆಯಲ್ಲಿ ಬಂದು— ಗೋವಿಂದರಾವ, ನಿನ್ನ ಪಾಪದ ಫಲವು ನಿನ್ನ ಉಡಿಯಲ್ಲಿ ಬೀಳುವ ಹೊತ್ತು ಬಂದಿರುತ್ತದೆ. ನಿನ್ನ ಕಾರಸ್ಥಾನವೆಲ್ಲ ಬೈಲಿಗೆ ಬಂದಿರುವದು. ರುದ್ರಪ್ಪನನ್ನು ಪೋಲೀಸರು ಹಿಡಿದೊಯ್ದರು; ನಿನ್ನ ಮೇಲೂ ವಾರಂಟು ಹುಟ್ಟಿದೆ; ಇಗೋ ಪೋಲೀಸರು ಬಂದರು, ಎಂದಳು. ಗೋವಿಂದರಾಯನು ಗಾಬರಿಯಾಗಿ ಅಲ್ಲಿಂದ ಕಾಲ್ತೆಗೆದನು. ಬಳಿಕ ಶಾರದೆಯು ಕಮಲೆಯನ್ನು ಕರೆದುಕೊಂಡು ಸುರಕ್ಷಿತವಾಗಿ ಅಲ್ಲಿಂದ ಹೊರಟಳು. ಅವರು ಸಮೀಪದ ಒಂದು ಹಳ್ಳಿಗೆ ಹೋಗಬೇಕೆಂದು ಹೊರಟಿದ್ದರು; ದಾರಿಯಲ್ಲಿ ಒಂದು ಹಳ್ಳವು ಹತ್ತಿತು. ಅಂದು ಅಮಾವಾಸ್ಯೆ ಇದ್ದದರಿಂದ ಕಗ್ಗತ್ತಲೆ ಕವಿದಿತ್ತು. ಎದುರಿಗೆ ಯಾರೋ ನಿಂತದ್ದರಿಂದ ಶಾರದೆಯು ಅಂಜಿ ಚೀರಿದಳು. ಆಗ ಎದುರಿಗೆ ನಿಂತ ವ್ಯಕ್ತಿಯು ಮುಂದಕ್ಕೆ ಬಂದು--ಅಮ್ಮಗಳಿರಾ, ನೀವು ಯಾರು? ಇಬ್ಬರೇ ಹೆಂಗಸರು ಇಷ್ಟು ಅಪರಾತ್ರಿಯಲ್ಲಿ ಎಲ್ಲಿಗೆ ಹೊರಟಿರುವಿರಿ? ನಿಜವಾದ ಸಂಗತಿಯನ್ನು ಹೇಳಿರಿ. ನಾನು ಒಬ್ಬ ಸಂನ್ಯಾಸಿಯಿದ್ದೇನೆ. ನಿಮಗೆ ನನ್ನಿಂದ ಸಹಾಯವಾದೀತು. ಎಂದು ನುಡಿಯಿತು. ಆಗ ಶಾರದೆಯು ಧೈರ್ಯಗೊಂಡು—ನಾನು ಶಾರದೆಯು, ಇವಳು ಕಮಲೆಯು, ಎಂದು ಹೇಳಿ ತಮಗೆ ಒದಗಿದ ವಿಪತ್ತನ್ನು ಹೇಳಿದಳು. ಆಗ ಆ ವ್ಯಕ್ತಿಯು—ಕಮಲೆಯೆಂದರೆ ರಾಮಪುರದ ಬಳವಂತರಾಯನ ಮಗಳಾದ ಕಮಲೆ ಏನು? ಎಂದು ಕೇಳಿತು. ಆಗ ಶಾರದೆಯು ಆಶ್ಚರಿಗೊಂಡು ಇದೇನು ನಮ್ಮ ಗುರುತು ನಿಮಗೆ ಹ್ಯಾಗೆ ಇರುವದು? ಎಂದಳು. ಸಂನ್ಯಾಸಿಯು ಮಾತನಾಡದೆ ಅವರನ್ನು ತನ್ನ ಗುಡಿಸಲಿಗೆ ಕರೆದೊಯ್ದು ದೀಪವನ್ನು ಹಚ್ಚಿದನು. ಬೆಳಕಿನಲ್ಲಿ ಸಂನ್ಯಾಸಿಯ ಮುಖವು ಸ್ಪಷ್ಟವಾಗಿ ಕಾಣಿಸಲು, ಕಮಲೆಯು—ಅಪ್ಪಾ, ಎಂದು ನುಡಿದು, ನೆಲಕ್ಕೆ ಬಿದ್ದಳು. ಬಳವಂತರಾಯನೂ ದುಃಖದಿಂದ ಮಗಳನ್ನು ಎಬ್ಬಿಸಿ, ಆಕೆಯನ್ನು ಸ್ವಾಂತ್ವಿಸಿದನು. ಆತನಿಗೆ ಮಗಳಿಗೆ ಈ ಎರಡನೇಸಲ ದುಃಖವೊದಗಿದ ಸಂಗತಿಯು ಗೊತ್ತಿರಲಿಲ್ಲ. ಕಮಲೆಯು ಎಲ್ಲವನ್ನೂ ಹೇಳಿದಳು. ಆಗ ಬಳವಂತರಾಯನು ಅದನ್ನು ಕೇಳಿ, ತಾನಾಗಿಯೇ ಮಗಳಿಗೆ ಈ ಪರಿ ದುಃಖಕೊಟ್ಟಂತಾಯಿತೆಂದು ಪಶ್ಚಾತ್ತಾಪಪಟ್ಟನು. ಬಳಿಕ ಅವನು ಮಗಳಿಗೆ ಸಮಾಧಾನ ಹೇಳಿ ನನ್ನ ಮೇಲಿನ ವಾರಂಟು ಹೋಗಿರುವದು. ಇನ್ನು ಊರಿಗೆ ಹೋಗಿ ಇರಲಿಕ್ಕೆ ಯಾವ ತೊಂದರೆಯೂ ಇಲ್ಲವೆಂದು ನುಡಿದನು.

ಬಳಿಕ ಬಳವಂತರಾಯನು ರಾಮಪುರಕ್ಕೆ ಬಂದು ಜಟಾ-ಗಡ್ಡಗಳನ್ನು ತೆಗೆಯಿಸಿ, ಮೊದಲಿನ ಬಳವಂತರಾಯನಾದನು. ಬಳವಂತರಾಯನ ಆಗಮನದಿಂದ ಜನರಲ್ಲಿ ಒಂದು ಪ್ರಕಾರದ ಸ್ಫೂರ್ತಿಯುಂಟಾಯಿತು.

ಇತ್ತ ರುದ್ರಪ್ಪನು ತುರಂಗದಲ್ಲಿಯೇ ಕೊಳೆಯುಹತ್ತಿದನು. ಅವನು ಯಾರ ಸಲುವಾಗಿ ಇಷ್ಟೊಂದು ಕಾರಸ್ಥಾನ ಮಾಡಿ ಜೇಲಿಗೆ ಬಂದಿದ್ದನೋ, ಅಂಥ ಅವನ ಒಡೆಯನಾದ ಗೋವಿಂದರಾಯನು ತನ್ನ ಉದ್ಧಾರದ ಸಲುವಾಗಿ ಏನೂ ಪ್ರಯತ್ನ ಮಾಡದೆ ಇದ್ದದ್ದನ್ನು ಕಂಡು, ಮನಸ್ಸಿನಲ್ಲಿಯೇ ತಳಮಳಿಸಹತ್ತಿದನು; ಆದರೆ ಮಾಡುವದೇನು? ಹಲ್ಲುಕಿತ್ತಿದ ಹಾವಿನಂತೆ ಅವನ ಸ್ಥಿತಿಯಾಗಿತ್ತು.

ಪಾಪಿಷ್ಠನು ಕಡೆತನಕ ಪಾಪ ಮಾಡುವದಿಲ್ಲ; ಒಮ್ಮೆಯಾದರೂ ಅವನಿಗೆ ಕೃತಕರ್ಮದ ಬಗ್ಗೆ ಪಶ್ಚಾತ್ತಾಪವಾಗಲಿಕ್ಕೇ ಬೇಕು. ಆ ಪ್ರಕಾರ ರುದ್ರಪ್ಪನಿಗೂ ಆಯಿತು; ಅವನು ಮಾಡಿದ್ದು ಪೈಶಾಚಿಕ ವ್ಯಾಪಾರವು. ಕಡೆಗೆ ಅವನು ಪಶ್ಚಾತ್ತಾಪಹೊಂದಿ, ಭುಜಂಗರಾಯರಿಗೆ ಭೆಟ್ಟಿಯಾಗಲಿಕ್ಕೆ ಹೇಳಿ ಕಳಿಸಿದನು.

ದಯಾವಂತರಾದ ಭುಜಂಗರಾಯರು ರುದ್ರಪ್ಪನ ಇಚ್ಛೆಯಮೇರೆಗೆ ಜೇಲಿನಲ್ಲಿಯೇ ಅವನ ಭೆಟ್ಟಿಗೆ ಹೋದರು. ರುದ್ರಪ್ಪನು ಪಶ್ಚಾತ್ತಾಪದಿಂದ ಅಳುತ್ತ— ದೇಸಾಯಿಯರೇ, ನಾನು ನರಾಧಮನು; ಅತಿ ನೀಚನು; ಈ ಜನ್ಮದಲ್ಲಿ ಅನೇಕ ಪಾಪಗಳನ್ನು ಮಾಡಿರುವೆನು. ನನಗೆ ಈಗ ಪಶ್ಚಾತ್ತಾಪವಾಗಿದೆ. ನಾನು ಮಾಡಿದ ಪಾಪಗಳಲ್ಲಿ ಬಳವಂತರಾಯನ ಮಗಳ ವಿಷಯವಾಗಿ ಮಾಡಿದ ಪಾಪವು ಹೆಚ್ಚಿನದು. ಆ ಪಾಪವು ನನ್ನ ದೇಹವನ್ನು ಒಳಗೇ ಸುಡಹತ್ತಿದೆ. ಎಂದು ಹೇಳಿ, ಮನೋಹರನಿಗೆ ಕಮಲೆಯ ವಿಷಯವಾಗಿ ಪತ್ರಬರೆದ ಮಜಕೂರು ಸಹ ತಿಳಿಸಿದನು. ಈ ಸುದ್ದಿಯು ಯಾರಿಗೂ ಗೊತ್ತಿದ್ದಿಲ್ಲ; ಯಾಕಂದರೆ ಕಮಲೆಯು ಈ ಸಂಗತಿಯನ್ನು ಬಸವಂತನ ಮುಂದೆ ಸಹ ಹೇಳಿದ್ದಿಲ್ಲ. ರುದ್ರಪ್ಪನ ಕಪಟಕಾರಸ್ಥಾನದ ಸಂಗತಿಯನ್ನು ಕೇಳಿ ಭುಜಂಗರಾಯರಿಗೆ ನಡುಗು ಹುಟ್ಟಿತು. ಮನುಷ್ಯನು ಹಣದ ಸಲುವಾಗಿ ಎಂಥ ನೀಚ ಕೆಲಸ ಮಾಡಲು ಸಿದ್ಧನಾಗುವನೆಂಬದು ಖಾತ್ರಿಯಾಯಿತು. ಆಗ ಭುಜಂಗರಾಯರು ಸಿಟ್ಟಿನಿಂದ—ರುದ್ರಪ್ಪ, ದೇವರು ಮಲಗಿರುವದಿಲ್ಲ; ಅವನು ಎಲ್ಲರನ್ನೂ ನೋಡುವನು. ನಿನ್ನ ಸಲುವಾಗಿ ಅವನು ಬೇರೆ ನರಕವನ್ನೇ ಸಿದ್ಧಮಾಡಿಟ್ಟಿರಬಹುದು. ಇರಲಿ, ಈಗ ನನ್ನನ್ನು ಯಾಕೆ ಕರೆಯಿಸಿದಿ?

ರುದ್ರಪ್ಪ—ಈ ಎಲ್ಲ ಸಂಗತಿಯನ್ನೂ ಹೇಳಿ ಮನಸ್ಸಿನ ಭಾರವನ್ನು ಕಡಿಮೆ ಮಾಡಿಕೊಳ್ಳುವದರ ಸಲುವಾಗಿ ಸುಮ್ಮನೆ ಕರೆಯಿಸಿದೆನು. ಮನೋಹರಪಂತನನ್ನು ಇಲ್ಲಿಗೆ ಕರೆಯಿಸಲು ನಿಮ್ಮಹೊರತು ಯಾರೂ ಸಮರ್ಥರಿಲ್ಲ; ನೀವು ಅವನನ್ನು ಕರೆಯಿಸಿರಿ; ನಾನು ಎಲ್ಲವನ್ನೂ ಹೇಳಿ, ಆತನ ಕ್ಷಮೆ ಬೇಡಿಕೊಳ್ಳುವೆನು.

ಭುಜಂಗ—ನೀನು ಬಲು ಪಾಪಿಷ್ಠನು. ಆದರೂ ಈಗ ಪಶ್ಚಾತ್ತಾಪವಾ ಗಿದೆ. ನಿನ್ನ ಮಾತಿನಂತೆ ಮನೋಹರಪಂತನನ್ನು ಕರೆಯಿಸುವೆನೆಂದು ಹೇಳಿ ಅಲ್ಲಿಂದ ಹೊರಟರು; ಮತ್ತು ಪಂತನಿಗೆ ಒಂದು ಪತ್ರ ಬರೆದರು.

ಪತ್ರದಂತೆ ಪಂತನು ಬಂದದ್ದು ನೋಡಿ ಭುಜಂಗರಾಯರಿಗೆ ಆನಂದವಾ ಯಿತು. ಯಾಕಂದರೆ ಅವರ ತಂಗಿಯ ಸಮಾನಳಾದ ಕಮಲೆಯ ಮುಂದಿನ ಸುಖಮಯ ಆಯುಷ್ಯವು ಪಂತನನ್ನು ಅವಲಂಬಿಸಿತ್ತು. ಭುಜಂಗರಾಯರು ಹೆಚ್ಚು ವೇಳೆ ಕಳೆಯದೆ, ಅವನನ್ನು ತುರಂಗದಲ್ಲಿರುವ ರುದ್ರಪ್ಪನ ಹತ್ತರ ಕ ಕೊಂಡು ಹೋದರು.

ಮನೋಹರಪಂತನನ್ನು ನೋಡಿದ ಕೂಡಲೆ ರುದ್ರಪ್ಪನ ಮೈಯ್ ನಡುಗು ಹುಟ್ಟಿತು. ಅವನು ಪಂತನ ಕಾಲು, ಹಿಡಕೊಂಡು ಬಿಕ್ಕಿಬಿಕ್ಕಿ ಅಳುತ್ತ ತಾನು ಮಾಡಿದ ಎಲ್ಲ ನೀಚ ಕೃತ್ಯವನ್ನೂ ಹೇಳಿದನು. ಅದನ್ನು ಕೇಳಿದಕೂಡ ಪಂತನ ಮೈಕೂದಲುಗಳು ಸೆಟ್ಟಗಾದವು. ಅವನು ಅಂಜಿ ರುದ್ರಪ್ಪನಿಂದ, ದೂ ಸರಿದು ನಿಂತನು. ನಿರಪರಾಧಿನಿಯಾದ ಹೆಂಡತಿಯ ಸಂಗಡ, ತಾನು ಪಶುವಿನಂ ವರ್ತಿಸಿದ ಬಗ್ಗೆ ಮನಸ್ಸಿನಲ್ಲಿ ಪಶ್ಚಾತ್ತಾಪ ಹುಟ್ಟಿ, ಅವನ ಮನಸ್ಸು ಅಧೀ ವಾಯಿತು.

ಬಳಿಕ ಪಂತನು ಮಾವನ ಮನೆಗೆ ಬಂದು ಹೆಂಡತಿಯ ಕ್ಷಮೆಯನ್ನು ಯಾಚಿಸಿ, ಅವಳೊಡನೆ ಕುಕುನೂರಿಗೆ ಹೋಗಿ, ಪ್ರೇಮದಿಂದ ನಡೆಯತೊಡ ದನು. ಕಮಲೆಯು ಉತ್ತಮ ಗೃಹಿಣಿಯಾಗಿ ಮಕ್ಕಳು-ಮರಿಗಳನ್ನು ಹಡೆದು ಸಂಸಾರಸುಖದಲ್ಲಿ ಮಗ್ನಳಾದಳು.

+ + + + + + +

ಮಹಾದುರ್ಜನನಾದ ರುದ್ರಪ್ಪನು ಜೇಲಿನಲ್ಲಿಯೇ ಘುಪ್ಫುಸ ವಿಕಾರದಿಂ ಸತ್ತನು. ನೀಚನಾದ ಗೋವಿಂದರಾಯನು ಕ್ಷಯರೋಗದಿಂದ ನೆಲ ಹಿಡಿದನು ಕೊನೆಗೆ ಅವನು ಭುಜಂಗರಾಯನ ಪ್ರಯತ್ನದಿಂದ ರೋಗಮುಕ್ತನಾಗಿ,ಬಳವಂ ರಾಯನ ಕ್ಷಮೆಯನ್ನು ಬೇಡಿ, ಕಮಲೆಯ ಮೇಲೆ ತಂಗಿಯಂತೆ ಪ್ರೇಮ ಮಾ ತೊಡಗಿದನು. ಬಳವಂತರಾಯನು ಭುಜಂಗರಾಯನ ಹಾಗು ಗೋವಿಂದರಾಯ ದಿವಾಣಗಿರಿಯನ್ನು ವಹಿಸಿ,ಪ್ರಜೆಗಳಿಗೆ ಸೌಖ್ಯವಾಗುವಂತೆ ಕಾರಭಾರ ನಡಿಸಿದನು

---

ಸಂಪೂರ್ಣ.